Rs 4.00

# ಹಾನಗಲ್ಲ ಕುಮಾರಸ್ವಾಮಿಗಳು

ಪಂಚಾಕ್ಷರಿ ಹಿರೇಮಠ

ಐ ಬಿ ಎಚ್ ಪ್ರಕಾಶನ
ಗಾಂಧಿನಗರ, ಬೆಂಗಳೂರು-560009

Rs 4/00

© ಸರ್ವಸ್ವಾಮ್ಯ : ಪ್ರಕಾಶಕರದು.

*

ಮುಖಪುಟ : ಚಂದ್ರನಾಥ್

*

ಛಾಯಾ ಚಿತ್ರಗಳು : ಎಲ್. ಡಿ. ಸಾತಾರಕರ್

*

ಮೊದಲನೆಯ ಮುದ್ರಣ : ಅಕ್ಟೋಬರ್ 1973.
ಪ್ರಕಾಶಕರು : ಶ್ರೀ ಪಿ. ಎನ್. ಕಾಮತ್, ಐ ಬಿ ಎಚ್ ಪ್ರಕಾಶನ, ಗಾಂಧಿನಗರ ಬೆಂಗಳೂರು-560009, ಮುದ್ರಕರು : ಹೆಚ್. ಎಸ್. ಎನ್. ರಾವ್, ಐ ಬಿ ಎಚ್ ಪ್ರಕಾಶನ ಪ್ರಿಂಟರಿ, ರಾಮಯ್ಯ ಇಂಡಸ್ಟ್ರಿಯಲ್ ಎಸ್ಟೇಟ್, ಬೆಂಗಳೂರು-560054

*

ಅಧಿಕೃತ ಮಾರಾಟಗಾರರು : ಇಂಡಿಯ ಬುಕ್ ಹೌಸ್, ಬೆಂಗಳೂರು-560009.

# ಅರ್ಪಣೆ



ಪರಮ ಪೂಜ್ಯರೂ, ಹಾನಗಲ್ಲ ಮಠಾಧ್ಯಕ್ಷರೂ ಆದ
ಶ್ರೀ ಮ. ನಿ. ಪ್ರ. ಸದಾಶಿವ ಮಹಾಸ್ವಾಮಿಗಳ
ಪಾದಪದ್ಮಂಗಳಲ್ಲಿ.

# ನನ್ನ ಮಾತು

ಇಂಡಿಯಾ ಬುಕ್ ಹೌಸ್–ಕನ್ನಡ ಪ್ರಕಾಶನೋದ್ಯಮದಲ್ಲಿ ಹೊಸ ಮನ್ವಂತರವನ್ನುಂಟುಮಾಡಿದೆ, ನಮ್ಮ ನಾಡಿನ ಭವ್ಯ ಪರಂಪರೆಗೆ, ಕ್ಷೇತ್ರಗಳಿಗೆ, ಕವಿ–ಕಾವ್ಯಕ್ಕೆ ಹೊಸ ಜೀವಕಳೆ ತಂದುಕೊಟ್ಟಿದೆ. ಈ ನಾಡಿನ ಇತಿಹಾಸ ಬರೆಯುವ ಇತಿಹಾಸಕಾರ ಈ ಸಂಸ್ಥೆ ಸಲ್ಲಿಸಿದ ಸೇವೆಯನ್ನು ಮುಕ್ತಕಂಠದಿಂದ ಪ್ರಶಂಸಿಸದಿರಲಾರ.

'ಹಾನಗಲ್ಲ ಕುಮಾರಸ್ವಾಮಿಗಳು' ಶಿವಯೋಗಿಗಳು. ಸಕಲ ಜೀವಿಗಳ ಲೇಸಿಗಾಗಿ ದುಡಿದವರು. ಅಂಥ ಮಹಾಸ್ವಾಮಿಗಳ ಚರಿತ್ರೆ ಬರೆಯುವ ಸೇವೆ ನನಗೆ ಸಿಕ್ಕಿದುದು ನನ್ನ ಭಾಗ್ಯವೆಂದು ತಿಳಿದಿದ್ದೇನೆ.

ಈ ಚರಿತ್ರೆ ರಚಿಸುವ ಕಾಲದಲ್ಲಿ ಶಿವಯೋಗ ಮಂದಿರದಲ್ಲಿ ಕೆಲವುದಿನಗಳಿದ್ದು ಪರಮಪೂಜ್ಯರೂ, ಹಾನಗಲ್ಲ ಮಠಾಧ್ಯಕ್ಷರೂ ಆದ ಶ್ರೀ ಮ. ನಿ. ಪ್ರ. ಸದಾಶಿವ ಮಹಾಸ್ವಾಮಿಗಳಿಂದ ಈ ಗ್ರಂಥಕ್ಕೆ ಸಾಮಗ್ರಿ ಸಂಗ್ರಹಿಸಿದೆ. ಆ ಸಮಯದಲ್ಲಿ ಪೂಜ್ಯ ಶ್ರೀಗಳು ತಮ್ಮ ಗುರುಗಳ ಬಗ್ಗೆ ಅಪಾರ ಅಭಿಮಾನದಿಂದ ಹಲವಾರು ಘಟನೆಗಳನ್ನು ವಿವರಿಸಿದರು. ನನ್ನನ್ನು ಆ ಸಮಯದಲ್ಲಿ ತುಂಬ ಅಕ್ಕರೆಯಿಂದ ನೋಡಿಕೊಂಡರು. ಆ ಪವಿತ್ರ ಪರಿಸರದಲ್ಲಿರುವುದೊಂದು ಪರಮಭಾಗ್ಯ.

ಘಟನೆಗಳನ್ನು ವಿವರಿಸಿದ ಪೂಜ್ಯ ಶ್ರೀಗಳಿಗೂ, ದ್ಯಾಂಪೂರ ಚನ್ನಕವಿಗಳ 'ಕುಮಾರೇಶ್ವರ ಪುರಾಣ' ಕ್ಕೂ, ಈ ಕೃತಿಗೆ ಬೇಕಾದಂಥ ಚಿತ್ರಗಳನ್ನು ನನ್ನೊಂದಿಗಿದ್ದು ತುಂಬ ಶ್ರದ್ಧೆಯಿಂದ ತೆಗೆದುಕೊಟ್ಟಿರುವ ಸುಪ್ರಸಿದ್ಧ ಕಲಾವಿದ ಶ್ರೀ ಎಲ್. ಡಿ. ಸಾತಾರಕರ್ ಅವರಿಗೂ, ಈ ಕೃತಿಯನ್ನು ನನ್ನಿಂದ ಬರೆಯಿಸಿದ ಇಂಡಿಯಾ ಬುಕ್ ಹೌಸಿನ ಮಿತ್ರರಿಗೂ ನನ್ನ ಅನಂತ ಕೃತಜ್ಞತೆಗಳು.

**ಪಂಚಾಕ್ಷರಿ ಹಿರೇಮಠ**

## ಯುಗ ಪುರುಷ

ಸಮಾಜಕ್ಕೆ, ನಾಡಿಗೆ ತಾವು ಜೀವನದುದ್ದಕ್ಕೂ ತಪಸ್ಸ ಗೈದು ಪಡೆದ ಸಿದ್ಧಿಯನ್ನು, ತಾಯ ಮಮತೆಯಿಂದ ಸಮಾಜ ಶಿಶುವಿಗೆ ನೀಡಿ–ಅದು ಆರೋಗ್ಯಕರವಾಗಿ, ಸುಖವಾಗಿ ಬೆಳೆಯುವಂತೆ ಮಾಡಿದರು. ಯಾರೂ ಮಾಡ



ಪರಮ ಪೂಜ್ಯರಾದ ಶ್ರೀ ಮ. ನಿ. ಪ್ರ. ಲಿಂಗೈಕ್ಯ ಹಾನಗಲ್ಲ ಕುಮಾರಸ್ವಾಮಿಗಳವರು.

ಲಾರದ, ಇನ್ನುಳಿದವರಿಗೆ ಅಸಾಧ್ಯವಾದ, ಅದ್ಭುತವಾದ ಕಾರ್ಯ ಮಾಡಿದರೆಂದೇ ಕುಮಾರಸ್ವಾಮಿಗಳು, ಹಾನಗಲ್ಲ ಈ ಯೋಗಿ ನಾಡಯೋಗಿಯಾದರು, ಯುಗಪುರುಷರಾದರು.

ಈ ಯೋಗಿ ಪುಂಗವ ಪ್ರಕೃತಿಪ್ರಿಯ, ಸಂಗೀತಪ್ರಿಯ, ಕಾವ್ಯಪ್ರಿಯ. ಎಲ್ಲಕ್ಕೂ ಹೆಚ್ಚಾಗಿ ಮಾನವತಾಪ್ರಿಯ. ಈತ ತುಳಿದ ನೆಲ ಪಾವನವಾಯಿತು, ನೆಲಸಿದ ತಾಣ ಪುಣ್ಯ ಕ್ಷೇತ್ರವಾಯಿತು, ಆಡಿದ ಮಾತು ಬೆಳಕಾಯಿತು, ನೋಡಿದ ನೋಟ ಶಿವನ ಕೂಟವಾಯಿತು. ಈತ ನಡೆದಲ್ಲೆಲ್ಲ ಬೆಳ ಕಿನ ಹೆಜ್ಜೆ ಮೂಡಿದವು. ಆಡಿದುದು ನಡೆಯಾಯಿತು. ನಡೆದುದು ನುಡಿಯಾಯಿತು. ಜ್ಞಾನ ಕ್ರಿಯೆಯಾಯಿತು. ಕ್ರಿಯೆಯೇ ಜ್ಞಾನವಾಯಿತು.

ಇಂಥ ಮಹೋನ್ನತ ಬದುಕನ್ನು ಬದುಕಿದ ಶ್ರೀ ಕುಮಾರ ಶಿವಯೋಗಿಗಳು ಬಡತನದ ಬವಣೆಯಲ್ಲಿ, ಕಷ್ಟ ಕಾರ್ಪಣ್ಯದಲ್ಲಿ ಸಿಲುಕಿದ ಮನೆತನದಲ್ಲಿ ಜನ್ಮತಾಳಿದರು. ಮಹಿಮಾ ಪುರುಷರ ಜನನವೇ ಹೀಗೇನೋ!

## ಜನನ

ಕನ್ನಡ ನಾಡಿನ ಸಾಂಸ್ಕೃತಿಕ ಕೇಂದ್ರವಾದ ಧಾರವಾಡ ಜಿಲ್ಲೆಯ ರಾಣೇಬಿದನೂರು ತಾಲೂಕಿನಲ್ಲಿ, ಜೋಯಿಸರ ಹರಳಳ್ಳಿ ಎಂಬುದೊಂದು ಚಿಕ್ಕ ಗ್ರಾಮ. ಈ ಚಿಕ್ಕ ಗ್ರಾಮ ದಲ್ಲಿ ಸಾಲೀ ಮಠದ ಬಸವಯ್ಯ ನೀಲಮ್ಮ ಎಂಬ ಹೆಸರಿನ ದಂಪತಿಗಳಿದ್ದರು. ಇವರು ಲಿಂಗಪೂಜಾನಿಷ್ಠರು, ಸದಾ ಚಾರಿಗಳು, ಆಚಾರದಲ್ಲಿ ನಿಸ್ಸೀಮರು. ಬಡತನವನ್ನೇ ಬಳು ವಳಿಯಾಗಿ ಭಾಗ್ಯವಾಗಿ ಪಡೆದರೂ ಅವರ ದಾಂಪತ್ಯ

ಜೀವನ ಉದಾತ್ತವಾದುದಾಗಿತ್ತು, ಅನುಕರಣೀಯ ವಾಗಿತ್ತು.

ಗುರು, ಲಿಂಗ, ಜಂಗಮ ನಿಷ್ಠಾಪರರಾದ ಈ ದಂಪತಿಗಳ ಪುಣ್ಯಗರ್ಭದಲ್ಲಿ ಕ್ರಿ.ಶ.೧೮೬೭ರ ಪ್ರಭವ ಸಂವತ್ಸರದ ಮಂಗಲ ಕಾಲದಲ್ಲಿ ಒಂದು ಗಂಡು ಮಗುವಿನ ಜನನವಾಯಿತು.

ಇಂದು ಈ ವಿಜ್ಞಾನಯುಗ ನಂಬಲು ಹಿಂಜರಿಯುವಂತಹ, ಪವಾಡವೆನ್ನುವಂತಹ ಘಟನೆಗಳು, ಈ ಯೋಗಿಯ ಜನನಕ್ಕೆ ಹಿನ್ನೆಲೆಯಾಗಿವೆ. ಮಹಾಸಾಧ್ವಿ ಶಿರೋಮಣಿಯಾದ ತಾಯಿ ನೀಲಮ್ಮನವರು ಒಮ್ಮೆ ತಮ್ಮ ಕನಸಿನಲ್ಲಿ ಮಾಹೇಶ್ವರ ಮೂರ್ತಿಯನ್ನು ಕಂಡರು. ಪರಮ ತೇಜಸ್ವಿಯಾದ ಆತ, ತನ್ನ ಕೈಯಲ್ಲಿದ್ದ ಪುಷ್ಪವನ್ನು, ಆ ತಾಯಿಗೆ ಆಶೀರ್ವದಿಸುತ್ತ "ತಾಯಿ ನಿನ್ನ ಪುಣ್ಯಗರ್ಭದಿಂದ ಓರ್ವ ಮಹಾಪುರುಷನ ಜನನವಾಗುತ್ತದೆ. ಆದರೆ ಆತನನ್ನ ನೀನು ಸಮಾಜೋದ್ಧಾರಕ್ಕಾಗಿ ಧಾರೆಯೆರೆಯಬೇಕು. ಹಾಗೆ ಮಾಡುತ್ತಿಯಾ ?" ಎಂದಾಗ ಆ ತಾಯಿ 'ಆಗಲಿ ಸ್ವಾಮಿ' ಎಂದು ತನ್ನ ಒಪ್ಪಿಗೆ ನೀಡಿದಳು. ಮಾಹೇಶ್ವರಮೂರ್ತಿಯ ಆಶೀರ್ವಾದವಾದ ಕೆಲ ದಿನಗಳಲ್ಲಿಯೇ ನೀಲಮ್ಮ ಗರ್ಭಧಾರಣೆ ಮಾಡಿದಳು. ಗರ್ಭದಲ್ಲಿ ಬೆಳೆಯುವ ಕೂಸು ಭವಿಯಾಗಿರಬಾರದೆಂದು ಗುರುಗಳನ್ನು ಕರೆಯಿಸಿ ಗರ್ಭಕ್ಕೆ ಲಿಂಗಧಾರಣೆ ಮಾಡಿಸಿದರು.

ಮಗುವಿನ ಜನನವಾದ ನಂತರ ಎರಡು ಮೂರು ದಿನಗಳು ಕಳೆದುಹೋದಾಗ ಆ ತಾಯಿ ಈ ಪೂರ್ವದಲ್ಲಿ ಕಂಡ ಕನಸಿಗೆ ಪೂರಕವಾಗಿ ಒಂದು ಘಟನೆ ನಡೆಯಿತು.

ಮಹಾಸಿದ್ಧಿ ಪುರುಷರಾದ ಓರ್ವ ಜಂಗಮಮೂರ್ತಿ

ಭಿಕ್ಷೆಗೆ ಇವರ ಮನೆಗೆಬಂದರು. ಬಂದು 'ಭವತಿಭಿಕ್ಷಾಂದೇಹಿ' ಎಂದಾಗ ಮನೆಯಲ್ಲಿದ್ದ ವೃದ್ಧೆ 'ಹಡೆದ ಮನೆ. ಭಿಕ್ಷೆ ನೀಡುವ ಹಾಗಿಲ್ಲ. ಮುಂದಾಗಿ' ಎಂದಾಗ ಜಂಗಮಮೂರ್ತಿ 'ಮಗು ಹೆಣ್ಣೋ ಗಂಡೋ?' ಎಂದರು. ಆದಕ್ಕೆ ಮುದುಕಿ 'ಗಂಡು ಸ್ವಾಮಿ' ಎಂದಳು. ಆಗ ಜಂಗಮರು 'ಸಂತೋಷ ಪಡು ತಾಯಿ. ಮನೆಗೆಬಂದಿರುವ ಜಂಗಮನಿಗೆ ಭಿಕ್ಷೆನೀಡು' ಎಂದರು. 'ದಾನ ಧರ್ಮ ಮಾಡಿದರೆ ಮಕ್ಕಳು ಜಾಸ್ತಿ ಯಂತೆ ಸ್ವಾಮಿ. ನಾವೋ ಬಡವರು. ಈ ಮಗನೇ ಸಾಕು' ಎಂದಳು. ಆದಕ್ಕೆ ಜಂಗಮ 'ಈ ಮಗುವು ನಿಮಗೆ ಒಜ್ಜೆ ಯಾಗಿದ್ದರೆ ನಮಗೇ ಕೊಟ್ಟುಬಿಡಮ್ಮ. ಸಂತೋಷದಿಂದ ಒಯ್ದು ಜೋಪಾನ ಮಾಡಿ, ಪಾರಮಾರ್ಥ ಜೀವನಕ್ಕೆ ಆತ ನನ್ನು ಅಣಿಗೊಳಿಸುತ್ತೇವೆ' ಎಂದರು. ಆದಕ್ಕೆ ಮುದುಕಿ ನಗುತ್ತ 'ತಾವೇ ತೆಗೆದುಕೊಂಡುಹೋಗಿ' ಎಂದು ಜಂಗ ಮರ ಕಡೆ ನೋಡುತ್ತಿರುವಂತೆಯೇ, ಜಂಗಮಮೂರ್ತಿ ನಿಂತಿದ್ದ ತಾಣ ಬರಿದಾಗಿತ್ತು. ಕೂಸು ಜನನವಾದ ನಂತರ ಮತ್ತೆ ಗುರುಗಳನ್ನು ಕರೆಯಿಸಿ ಜನ್ಮ ಲಿಂಗಧಾರಣೆ ಮಾಡಿ ಸಿದರು ಕೂಸಿಗೆ.

ಹನ್ನೊಂದನೆಯ ದಿನ ಒಂದು ಮಂಗಲ ಮಹೂರ್ತ ದಲ್ಲಿ ಮುತ್ತೈದೆಯರೆಲ್ಲ ಸೇರಿ ತೊಟ್ಟಿಲದಲ್ಲಿಟ್ಟು ಜೋಗು ಳವ ಪಾಡಿದರು–ಜಗದೋದ್ಧಾರಕನಿಗೆ. ಗುರುಗಳು ಬಂದು 'ಸದಾಶಿವಯ್ಯ' ನೆಂದು ನಾಮಕರಣ ಮಾಡಿದರು.

ಮಗು ದಿನಗಳೆದಂತೆ ಮುದ್ದುಮುದ್ದಾಗಿ ಬೆಳೆಯಿತು. ಆ ಬಟ್ಟಲು ಕಣ್ಣುಗಳಲ್ಲಿ ತುಂಬಿದ ಬೆಳಕನ್ನು ಕಂಡು ಜನ ಮುಗ್ಧರಾಗುತ್ತಿದ್ದರು. ಅಂಬೆಗಾಲಿಕ್ಕಿ ಮನೆಯ ತುಂಬೆಲ್ಲ ಓಡಾಡಿದರೆ ಮನೆಮುಂದಿಗೆಲ್ಲ ಹಬ್ಬ. ನಗೆ ಬೆಳುದಿಂಗಳ

ಸೂಸುತ್ತ ಮನೆಯಲ್ಲಿದ್ದ ಕತ್ತಲೆಯು ಕಳೆದ. ಆತನ ತೊದಲ್ನುಡಿ ಮಧುರ ಸಂಗೀತವಾಯಿತು ತಂದೆ ತಾಯಿಗೆ, ನೆರಮನೆಯವರಿಗೆ.

## ಬಾಲ್ಯ ಹಾಗೂ ಶಿಕ್ಷಕ ವೃತ್ತಿ

ಒಂದು ಸುಮುಹೂರ್ತದಲ್ಲಿ ತಂದೆ ತಾಯಿ ಅಕ್ಷರಾಭ್ಯಾಸಕ್ಕೆ ಪ್ರಾರಂಭಿಸಿದರು. ಸದಾಶಿವನ ಆರಂಭದ ಅಭ್ಯಾಸ ಅಜ್ಜಂದಿರಾದ ಪಂ. ಕೊಟ್ಟೂರಪ್ಪಯ್ಯಗಳ ಪಾಠಶಾಲೆಯಲ್ಲಿಯೇ ನಡೆಯಿತು.

ಆರೇಳು ವರುಷದವನಾದಾಗ ಮನೆಯ ಬೆಳಗುತ್ತಿದ್ದ ಈ ಬೆಳಕು ಓಣಿಗೆ ಬಂತು, ಶಾಲೆಗೆ ಬಂತು. ಓಣಿಯ ಸಮವಯಸ್ಕರೊಂದಿಗೆ ಆಟವಾಡತೊಡಗಿದ. ಆದರೆ ಆತನ ಆಟಪಾಟಗಳಲ್ಲಿ ಆತನದೇ ಒಂದು ವೈಶಿಷ್ಟ್ಯ. ಎಲ್ಲ ಆಟಗಳಿಗಿಂತ ಗೋಲಿಗುಂಡಿನಾಟದಲ್ಲಿ ಆತನಿಗೆ ಆಸಕ್ತಿ ಹೆಚ್ಚು. ಈ ಆಟದಲ್ಲಿ ಬಾಲಕ ಸದಾಶಿವ ಅದ್ಭುತವಾದ ಗುರಿ ಸಾಧನೆ ಸಾಧಿಸಿದ. ಗೋಲಿಯಾಟದಲ್ಲಿಟ್ಟ ಆತನ ದೃಷ್ಟಿ, ಏಕಾಗ್ರತೆಯೇ ಮುಂದೆ ದೃಷ್ಟಿಯೋಗದಲ್ಲಿ ಪರಿವರ್ತನೆಯಾಯಿತು. ಮನೆ ಅಂಗಳದಲ್ಲಿ ಆಗಾಗ ಬಂದು, ದೊಂಬರು ಹೂಡುತ್ತಿದ್ದ ಆಟವನ್ನು ತನ್ನ ಸಹಪಾಠಿಗಳೊಂದಿಗೆ, ಓರಿಗೆಯ ಗೆಳೆಯರೊಂದಿಗೆ ಬಹು ಕುತೂಹಲದಿಂದ, ಸದಾಶಿವ ನೋಡುತ್ತಿದ್ದುದುಂಟು. ಯಾವ ಅಂಜಿಕೆ ಇಲ್ಲದೆ ಆಟಗಾರರು ಗಳದ ಮೇಲೆ ನಡೆಯುವುದು, ಉದ್ದನೆ ಗಳ ನೆಲದ ಮೇಲೆ ನಿಲ್ಲಿಸಿ ಅದರ ತುದಿಯಲ್ಲಿ ಹೊಕ್ಕಳ ಹಚ್ಚಿ, ಇಡೀ ದೇಹವನ್ನು ಅಂತರಂಗದಲ್ಲಿಯೇ ನಿಲ್ಲಿಸುವುದು–ಇದನ್ನೆಲ್ಲ ಕಂಡು ಅಚ್ಚರಿ

ಯೊಂದಿಗೆ ಈ ಸಾಧನೆಯ ಬಗ್ಗೆ ಆಸಕ್ತನಾದ. ಈ ಆಸಕ್ತಿಯೇ ಸದಾಶಿವನಲ್ಲಿ ಹಠಯೋಗ ಜಾಗೃತಿಯನ್ನುಂಟು ಮಾಡಿತು. ದೈವವೇ ಈ ಪೂರ್ವ ಸಿದ್ಧತೆಗೆ ಬಾಲಕನನ್ನು ಅಣಿಗೊಳಿಸಿರಬೇಕು. ಬರುಬರುತ್ತ ಸದಾಶಿವ ಶಾಲೆಯ ಅಭ್ಯಾಸಕ್ಕಿಂತಲೂ ದೃಷ್ಟಿಯೋಗ ಹಾಗೂ ಹಠಯೋಗವನ್ನೇ ಹೆಚ್ಚು ಹೆಚ್ಚು ಅಭ್ಯಾಸ ಮಾಡತೊಡಗಿದ. ಇದನ್ನು ಆತನಿಗೆ ಯಾರೂ ಕಲಿಸಲಿಲ್ಲ. ಚಿಕ್ಕ ಬಾಲಕ ಲಿಂಗಪೂಜೆಗೆ ಕುಳಿತನೆಂದರೆ, ಗಂಟೆಗಟ್ಟಲೆ ಅಂಗೈಯ ಆಕಾಶದಲ್ಲಿ ಗುರು ನೀಡಿದ ಇಷ್ಟಲಿಂಗ ಮಿನುಗುತ್ತಿದ್ದರೆ, ಒಂದೇ ಸವನೆ ಅನಿಮಿಷ ನೇತ್ರನಾಗಿ ನೋಡುತ್ತಲೇ ಇರುತ್ತಿದ್ದ. ಮಗನ ಲಿಂಗನಿಷ್ಠೆ ಕಂಡು ತಂದೆ, ತಾಯಿ, ಅಜ್ಜ ಎಲ್ಲರೂ ಮಂತ್ರ ಮುಗ್ಧರಾಗುತ್ತಿದ್ದರು.

ಪಂ. ಕೊಟ್ಟೂರಪ್ಪಯ್ಯಗಳಿಂದಾಗಿ ಬಾಲಕ ಸದಾಶಿವಯ್ಯ ಶಾಲೆಯ ಅಭ್ಯಾಸದೊಂದಿಗೆ ಮುಪ್ಪಿನಾರ್ಯರ, ನಿಜಗುಣರ ಪದ್ಯಗಳನ್ನೂ ಕಂಠಪಾಠ ಮಾಡಿ ಹಾಡುತ್ತಿದ್ದ. ಶಾಲೆಯ ಅಭ್ಯಾಸದಲ್ಲೂ ಜಾಣನಾಗಿಯೇ ಇದ್ದ. ತುಂಬಿದ ಮನೆಗೆ ಬಡತನವೇ ದಾಳಿಯಿಕ್ಕಿರುವಾಗ ಸದಾಶಿವಯ್ಯನ ವಿದ್ಯಾಭ್ಯಾಸ ನಿರಾತಂಕವಾಗಿ ಸಾಗಲು ಸಾಧ್ಯವಾಗಲಿಲ್ಲ. ದುರ್ದೈವದಿಂದಾಗಿ ಸದಾಶಿವಯ್ಯನ ತಂದೆ ಬಸವಯ್ಯನವರು ಲಿಂಗೈಕ್ಯರಾದುದು ಮನೆತನಕ್ಕೆ ಸಹಿಸಲಾರದ ಆಘಾತವಾಯಿತು. ಚಿಕ್ಕವರಾದ ಸದಾಶಿವಯ್ಯ ಹಿಟ್ಟಿನ ಭಿಕ್ಷೆಗಾಗಿ ಭಕ್ತರ ಮನೆ ಮನೆಗೆ ಹೋಗಬೇಕಾಗಿ ಬಂತು. ಓದಿ ಜಾಣನಾಗಬೇಕಾದ ಬಾಲಕ ಮನೆಯ ಭಾರ ಕಡಿಮೆ ಮಾಡಲು ಭಿಕ್ಷಾಟನೆ ಮಾಡಬೇಕಾಗಿ ಬಂತು. ಬಹುಶಃ ಮುಂದೆ ವಿರಕ್ತನಾಗಲಿರುವ ಮಗುವಿಗೆ ಈಗಿನಿಂದಲೇ

ಅಹಂಕಾರ ನಿರಸನದ ಪಾಠವೇನೋ! ದೈವದ ಇಚ್ಛೆ ಹಾಗೇ ಇರಬೇಕು. ಬೆಳಗಿನಲ್ಲೆಲ್ಲ ಭಿಕ್ಷಾಟನೆ. ಮಧ್ಯಾಹ್ನ ಮಾತ್ರ ಶಾಲೆ. ಈ ಒಪ್ಪೊತ್ತಿನ ಶಾಲೆಯ ಓದು ಅವರ ತೃಷೆ ಹಿಂಗಿಸಲಿಲ್ಲ. ಒಮ್ಮೆ ಭಿಕ್ಷಾಟನೆಗೆ ಹೋದಾಗ ಅವರ ಜೀವನಕ್ಕೆ ಹೊಸ ತಿರುವು ಬಂತೆಂದು ಹೇಳಬೇಕು. ಓರ್ವ ಯಜಮಾನ 'ನೀನು ಬುದ್ಧಿವಂತನಾಗಬೇಕು ಸ್ವಾಮಿ. ಓದಬೇಕಾದ ವಯಸ್ಸಿನಲ್ಲಿಯೇ ಭಿಕ್ಷಾಟನೆಗೆ ನಿಂತುಬಿಟ್ಟರೆ ಗತಿ? ಮನೆಯ ತೊಂದರೆ ಏನೇ ಇರಲಿ, ಓದು. ಭಿಕ್ಷೆ ಬೇಡುವುದನ್ನು ಬಿಡು' ಎಂದು ಹೇಳಿದನಲ್ಲದೆ ಭಿಕ್ಷೆ ಬೇಡುವುದರ ಬಗ್ಗೆ ಕೊಂಚ ಹಗುರವಾಗಿಯೂ ಮಾತನಾಡಿದ. ಭಾವುಕನಾದ ಬಾಲಕ ಸದಾಶಿವಯ್ಯನಿಗೆ ಆ ಮಾತುಗಳು ಮನನೋಯಿಸಿದವು. ಅಲ್ಲಿಂದ ಬಂದವನೇ ಯಾರಿಗೂ ಏನನ್ನೂ ಹೇಳದೆ ಬಟ್ಟೆ ಒಗೆಯಲೆಂದು ಬಾವಿಗೆ ಹೋದವನು, ತಿರುಗಿ ಮನೆಗೆ ಹೋಗಲೇ ಇಲ್ಲ. ಬಾವಿಗೆ ಬಂದಿದ್ದ ಓಣಿಯ ಜನರ ಕೈಯಲ್ಲಿ, ತೊಳೆದ ಬಟ್ಟೆಯನ್ನು ಕಳಿಸಿ, ಹಸಿದ ಹೊಟ್ಟೆಯಲ್ಲಿಯೇ ಕಜ್ಜರಿಗ್ರಾಮಕ್ಕೆ ನಡೆದ. ಆ ಊರಿನಲ್ಲಿ ಶಾಲೆ ಚೆನ್ನಾಗಿದೆಯೆಂದು ತಿಳಿದ ಆತ, ಅಲ್ಲಿಯೇ ತನ್ನ ಮುಂದಿನ ಅಭ್ಯಾಸ ಮುಂದುವರಿಸಬೇಕೆಂಬ ಆಸೆಯಿರಿಸಿಕೊಂಡು, ದಾರಿಯುದ್ದಕ್ಕೂ ಭವಿಷ್ಯದ್ ಜೀವನದ ಬಗ್ಗೆ, ಮನೆಯ ದಾರುಣ ಸ್ಥಿತಿಯ ಬಗ್ಗೆ, ತಾಯ ಬಗ್ಗೆ ಯೋಚಿಸುತ್ತಾ ನಡೆದ. ಅಂತೂ ಹೊತ್ತು ನೆತ್ತಿಗೇರಿದಾಗ ಕಜ್ಜರಿಗ್ರಾಮ ತಲುಪಿದ. ಊರಹಿರಿಯರ ಮನೆಗೆ ಹೋಗಿ ತನ್ನ ಸ್ಥಿತಿಗತಿ ತಿಳಿಸಿದ, ತನ್ನ ಓದಬೇಕೆನ್ನುವ ಆಸೆಯನ್ನೂ ಅರುಹಿದ. ಕಜ್ಜರಿಯ ಹಿರೇಮಠದ ರಾಚಯ್ಯನವರು ಬಾಲಕನ ಸಹಾಯಕ್ಕೆ ಬಂದರು. ತೇಜಃಪುಂಜವಾದ ಕಣ್ಣುಗಳು, ಮುಖ

ದಲ್ಲಿರುವ ಪ್ರಶಾಂತತೆ, ದೃಢತೆ, ನಿಶ್ಚಲತೆ ಕಂಡ ಊರಿನಜನ ಆತನಲ್ಲಿ ಯಾವುದೋ ಒಂದು ಅವ್ಯಕ್ತವಾದ ಶಕ್ತಿ ಮನೆ ಮಾಡಿದೆಯೆಂಬುದನ್ನು ಅರಿತು, ಸಂತಸಗೊಂಡು ಆತನ ಸಹಾಯಕ್ಕೆ ಬಂದರು. ಕೆಲವರು ಪುಸ್ತಕ ಕೊಡಿಸಿದರು, ಉಡಲು ಬಟ್ಟೆ ಕೊಡಿಸಿದರು. ಸದಾಶಿವಯ್ಯನಿಗೆ ತಾನಿನ್ನು ಮುಂದುವರಿಯಬಲ್ಲೆ ಎಂಬ ಭರವಸೆ ಮೂಡಿತು. ಅಲ್ಲಿಂದಲೇ ಜನ್ಮ ನೀಡಿದಾ ತಾಯಲ್ಲಿ ಕ್ಷಮೆಕೋರಿ 'ನೋಡಮ್ಮ ನಿನ್ನ ಮಗ ಓದಿ ಜಾಣನಾಗುತ್ತಾನೆ. ಅಲ್ಲಿಂದ ನಿನ್ನ ಮನೆತನಕ್ಕೆ ಕೀರ್ತಿ ತರುತ್ತಾನೆ. ಈಗ ನನ್ನನ್ನು ಕ್ಷಮಿಸಿಬಿಡಮ್ಮ' ಎಂದು ಮನದಲ್ಲಿಯೇ ಕ್ಷಮೆ ಬೇಡಿ ಕಣ್ಣೀರುಗರೆದ, ಕೆಲ ನಿಮಿಷ. ಮತ್ತೆ ಧೈರ್ಯ ತಂದುಕೊಂಡು ಏಕಾಗ್ರ ಚಿತ್ತನಾಗಿ ಓದಿನಲ್ಲಿ ಮಗ್ನನಾದ.

ಗುರುಗಳ ಪರಮ ಪ್ರೀತಿಗೆ ಪಾತ್ರನಾದ. ತನ್ನ ಸದಾಚಾರ ಹಾಗೂ ಅಂಥ ಎಳೆಯ ವಯಸ್ಸಿನಲ್ಲಿಯೇ ಸಾಧಿಸಿದ ಲಿಂಗಾನುಸಂಧಾನದಿಂದ ಊರ ಹಿರೇಮಠದ ಸ್ವಾಮಿಗಳಿಗೆ ಅಚ್ಚುಮೆಚ್ಚಿನವನಾದ.

ಮುಲ್ಕಿ ಪರೀಕ್ಷೆ ಕೊಟ್ಟಾಯಿತು. ಆದರೆ ಆಚ್ಚರಿಯ ಮಾತೆಂದರೆ, ತುಂಬ ಬುದ್ಧಿವಂತನಾದ ಈ ಬಾಲಕ, ಮುಲ್ಕಿ ಪರೀಕ್ಷೆಯಲ್ಲಿ ಉತ್ತೀರ್ಣನಾಗಲಿಲ್ಲ. ಇದರಿಂದಾಗಿ ಸದಾಶಿವಯ್ಯ ಕಟ್ಟಿದ ಕನಸು ನುಚ್ಚು ನೂರಾಯಿತು. ಕಜ್ಜರಿ ಗ್ರಾಮದಲ್ಲಿ ಆತನಿಗೆ ಇರಲು ಮನಸ್ಸಾಗಲಿಲ್ಲ. ಅಲ್ಲಿಂದ ಹೊರಟು ತಾಯ ತವರೂರಾದ ಲಿಂಗದಹಳ್ಳಿ ತಲುಪಿದ. ಜೀವನದಲ್ಲಿ ತುಂಬ ನಿರಾಶೆಯನ್ನುಂಟು ಮಾಡಿತ್ತು ಈ ಅನುತ್ತೀರ್ಣತೆ. ಮನಸ್ಸು ನೂರು ಸಮಸ್ಯೆಗಳ ಆಗರವಾಯಿತು.

ಮುಲ್ಕಿ ಪರೀಕ್ಷೆಯಲ್ಲಿ ತೇರ್ಗಡೆ ಪಡೆಯಲಾರದ ಸದಾಶಿವಯ್ಯ ಹೊಸ ಸಾಹಸಕ್ಕೆ ಕೈ ಹಾಕಿದ. ತಾನೇ ಅಧ್ಯಾಪಕನಾಗಿ ಆ ಊರಲ್ಲಿ ಖಾಸಗಿ ಶಾಲೆ ಆರಂಭಿಸಿದ. ವಿದ್ಯಾರ್ಥಿಗಳು ಬಂದರು. ಶ್ರದ್ಧೆಯಿಂದ ಮಕ್ಕಳಿಗೆ ವಿದ್ಯಾಭ್ಯಾಸ ಮಾಡಿಸತೊಡಗಿದ. ಮಕ್ಕಳ ಪಾಲಕರು ತಮ್ಮ ಹುಡುಗರ ಓದಿನ ಬಗ್ಗೆ ತೃಪ್ತಿ ಪಡೆಯತೊಡಗಿದರು. ಶಾಲೆ ಚೆನ್ನಾಗಿಯೇ ನಡೆಯತೊಡಗಿತು. ಹೊಟ್ಟೆಯ ಪ್ರಶ್ನೆ ಬಿಟ್ಟಿತು. ಸದಾಶಿವಯ್ಯನಿಗೆ ಹೊಟ್ಟೆಯ ಹಸಿವೆಗಿಂತ ನೆತ್ತಿಯ ಹಸಿವೆ ಅಧಿಕವಾಗಿತ್ತು. ಆದಕ್ಕಾಗಿ ಲಿಂಗದಹಳ್ಳಿಯಲ್ಲಿಯೇ ಇದ್ದ ಆಧ್ಯಾತ್ಮ ವಿದ್ಯೆಯಲ್ಲಿ ಬಲ್ಲಿದರೆನಿಸಿದ್ದ ಸಮಾಳದ ಬಸಯ್ಯನವರಲ್ಲಿಗೆ ಹೋಗಿ, ತನ್ನ ಹಸಿವೆಯ ವಿಷಯ ತಿಳಿಸಿದ. ಬಸಯ್ಯನವರು ಪಾರಮಾರ್ಥ ಸಾಧಕರು. ಎಳೆಯನ ಕಣ್ಣಲ್ಲಿ ಕಣ್ಣಿಟ್ಟು ನೋಡಿ ಏನೋ ಅಭೂತಪೂರ್ವವಾದುದನ್ನು ಕಂಡವರಂತೆ ಸಂತಸಗೊಂಡರು. ಈತ ಅಸಾಮಾನ್ಯನೆಂಬುದನ್ನೂ ಕಂಡುಕೊಂಡ ಅವರು ಆ ಕೂಡಲೇ 'ನಿನಗೆ ವೇದಾಂತ ಹೇಳಿಕೊಡುವುದು ನನ್ನ ಭಾಗ್ಯ' ಎನ್ನುತ್ತ ನಿಜಗುಣ ಶಿವಯೋಗಿಗಳ 'ಕೈವಲ್ಯಪದ್ಧತಿ' ಆರಂಭಿಸಿಯೇ ಬಿಟ್ಟರು. ಸದಾಶಿವಯ್ಯ ಬಸಯ್ಯನವರು ಹೇಳಿದುದಕ್ಕಿಂತಲೂ ಹೆಚ್ಚು ಹೆಚ್ಚು, ಸ್ವತಃ ಪರಿಶ್ರಮವಹಿಸಿ, ನಿಜಗುಣ ಶಿವಯೋಗಿಗಳ ಸಾಹಿತ್ಯವನ್ನು ಕರತಲಾಮಲಕ ಮಾಡಿಕೊಳ್ಳತೊಡಗಿದ.

## ಸಾಸಿರದಳ ಕಮಲ ಅರಳಿತು

ನಿಜಗುಣರ ಇಷ್ಟ–ಪ್ರಾಣ–ಭಾವಲಿಂಗಗಳ ಸೂಕ್ಷ್ಮಾತಿಸೂಕ್ಷ್ಮ ತಿಳುವಳಿಕೆಯನ್ನು ನೀಡುವ 'ಕೈವಲ್ಯ ಪದ್ಧತಿ'

ಸದಾಶಿವಯ್ಯನವರ ಬಾಳನ್ನು ಬಹು ಉದಾತ್ತಗೊಳಿಸಿತು. ಲಿಂಗಪೂಜೆಯಲ್ಲಿ ನಿರತರಾದರೆ ಬಾಹ್ಯಲೋಕದ ಪ್ರಜ್ಞೆ ಇರುತ್ತಿರಲಿಲ್ಲ. ನಿಜಗುಣರ ಗ್ರಂಥಗಳ ಸತತಾಧ್ಯಯನ ದಿಂದಾಗಿ ಅವರಲ್ಲಿದ್ದ ವೈರಾಗ್ಯ ಇನ್ನೂ ಬಲಿಯಿತು. ಈ ಎಳೆಯ ವಯಸ್ಸಿನಲ್ಲಿಯೇ ಎಲ್ಲದರ ಮಮಕಾರವನ್ನೂ ತೊರೆದು ವೀರ ವಿರಾಗಿಯಾದರು. ಅರಿಷಡ್ವರ್ಗಗಳನ್ನು ಮೀರಿ ನಿಂತ ಮಹಿಮರಾದರು.

ಈ ಅವಧಿಯಲ್ಲಿ ಅದೆಷ್ಟೋ ಸಲ ತಾಯಿ ಬಂದು ಕರೆ ದರು–ಊರಿಗೆ ಬಾಯೆಂದು. ಅವರು ಹೋಗಲೊಪ್ಪದೆ ಪ್ರತಿಸಲವೂ ತಾಯಿಗೆ ಸಮಾಧಾನ ಹೇಳಿಕಳಿಸುತ್ತ ಬಂದರು.

ಆದರೆ............

ಈಗ ಮತ್ತೆ ತಾಯ ಆಗಮನ. ಮಗನಿಗೆ ಮದುವೆಯ ವಯಸ್ಸು. ಮದುವೆ ಮಾಡಿದರೆ ಸಂಸಾರದಲ್ಲಿ ಮಗನಿಗೆ ಆಸಕ್ತಿ ಬೆಳೆದು, ಮಗ ಮನೆಯಲ್ಲಿರುವಂತಾಗಬಹುದೆಂಬ ವಿಚಾರ, ತಾಯ ಮಮತೆಯಲ್ಲಿ ಮನೆ ಮಾಡಿತ್ತು. ಆದರೆ ಆತ ಈ ಮಾಯಾಜಾಲದಲ್ಲಿ ಸಿಕ್ಕುವಂಥಾತನಲ್ಲವೆಂಬುದು ತಾಯ ಮೋಹಕ್ಕೆ ತಿಳಿಯುವುದೆಂತು? ತನ್ನ ತವರುಮನೆ ಯಲ್ಲಿದ್ದ ಮಗನನ್ನು ಕರೆದೊಯ್ದು ಮದುವೆಮಾಡ ಬೇಕೆಂದು ಬಂದ ತಾಯಿಗೆ ಮತ್ತೆ ನಿರಾಶೆ. ಸದಾಶಿವಯ್ಯನವ ರದು ಒಂದೇ ಹಠ– "ಸಂಸಾರ ನನಗೆ ಸಲ್ಲದು ತಾಯಿ, ಸತ್ಯ ವಾದ, ಚಿರಂತನವಾದ, ಲೋಕಹಿತಾರ್ಥವಾದ ಪ್ರಪಂಚಕ್ಕೆ ನನ್ನನ್ನೇ ನಾನು ಅರ್ಪಿಸಿಕೊಳ್ಳಬೇಕೆಂದು ನಿರ್ಣಯಿಸಿದ್ದೇನೆ. ನನ್ನನ್ನು ಈ ಮಾರ್ಗದಿಂದ ವಿಮುಖನಾಗುವಂತೆ ನೀನು ಮಾಡಬೇಡ. ನಾನು ಆರಿಸಿಕೊಂಡಿರುವ ಮಾರ್ಗ ಸರಿ

ಯಾಗಿದೆ ಎಂದು ನಾನು ಅರಿತಿದ್ದೇನೆ. ನೀನೂ ಆಶೀರ್ವದಿಸು" ಎಂದು ತನ್ನ ದೃಢ ನಿಲುಮೆ ತಿಳಿಸಿದ. ತನ್ನ ಖಾಸಗಿ ಪಾಠಶಾಲೆಯು ಕಾಯಕದಿಂದ ಬಂದುದನ್ನೆಲ್ಲ ತಾಯ ಪಾದಕ್ಕರ್ಪಿಸಿ ಆ ಸ್ಥಳದಿಂದ ಆ ಕೂಡಲೇ ಹೊರಡುತ್ತಾನೆ. ಎಲ್ಲ ಮೋಹವನ್ನೂ ಒಮ್ಮೆಲೇ ಕಿತ್ತೆಸೆದು ಧೀರೋದಾತ್ತತೆಯಿಂದ ಸಮಾಜ ಪುರುಷನಾಗಲು ಹೊರಡುತ್ತಾನೆ.

## ಲಿಂಗದಹಳ್ಳಿಯಿಂದ-ಹೂಬಳ್ಳಿಗೆ

ಆ ಹೊತ್ತಿಗಾಗಲೇ ಹುಬ್ಬಳ್ಳಿಯ ಆರೂಢರು ವೇದಾಂತ ಮಾರ್ಗದಲ್ಲಿ ನಿಸ್ಸೀಮರೆಂದು ದೇಶದ ತುಂಬೆಲ್ಲ ಕೀರ್ತಿ ಹಬ್ಬಿತ್ತು. ನಿಜಗುಣ ಸಾಹಿತ್ಯವನ್ನು ಇನ್ನೂ ಆಳವಾಗಿ ಅರಿಯೋಣ ಎಂಬ ವಿಚಾರದಿಂದ ಸದಾಶಿವಯ್ಯ ಹುಬ್ಬಳ್ಳಿಗೆ ಬಂದು ರುದ್ರಾಕ್ಷಿ ಮಠದಲ್ಲಿ ವಾಸ ಮಾಡಿದರು. ಆರೂಢರಲ್ಲಿ ವೇದಾಂತ ಅಧ್ಯಯನ ಆರಂಭಿಸಿದರು. ನಿಜಗುಣರ ಷಟ್‌ಶಾಸ್ತ್ರ ಗ್ರಂಥಗಳ ಅಧ್ಯಯನ ನಡೆಯಿತು. ಆರೂಢರಿಗೆ ಈ ಶಾಸ್ತ್ರದ ಮೇಲಿರುವ ಪ್ರಭುತ್ವ, ಸದಾಶಿವಯ್ಯನವರಿಗೆ ಮೆಚ್ಚಿಕೆಯಾದರೂ, ಇಷ್ಟಲಿಂಗದ ಬಗ್ಗೆ ಆರೂಢರಲ್ಲಿದ್ದ ಅನಾಸಕ್ತಿ, ಅವರ ಮನಸ್ಸನ್ನು ನೋಯಿಸಿತಲ್ಲದೆ ವಿಚಾರ ಮಾಡಲು ಹಚ್ಚಿತು. ಇಷ್ಟಲಿಂಗ ಬರೀ ಬಾಹ್ಯದ ಕುರುಹು. ಅದನ್ನು ಧರಿಸುವುದು ಅಂಥ ಮಹತ್ವದ್ದಲ್ಲ. ಬಾಹ್ಯಾಚಾರಣೆಗೆ ಮಹತ್ವ ಕೊಡಬಾರದು–ಎಂಬ ವಿಚಾರಗಳನ್ನು ಆರೂಢರು ಹೇಳಿದಾಗ ಸದಾಶಿವಯ್ಯನವರನ್ನು ಗೊಂದಲಕ್ಕೆ ಈಡುಮಾಡಿತು. ಹುಬ್ಬಳ್ಳಿಯ ಎರಡೆತ್ತಿನ ಮಠದ ಶ್ರೀಗಳು ಶಿವಾನುಭವದಲ್ಲಿ ನಿಷ್ಣಾತರಾಗಿದ್ದರು. ಆಗ ಸದಾಶಿವಯ್ಯ

ನವರು ಅವರಲ್ಲಿಗೆ ಹೋಗಿ ತಮ್ಮ ದುಗುಡವನ್ನು ತೋಡಿಕೊಂಡರು. ಈ ವಿಚಾರದಲ್ಲಿ ಸಾಕಷ್ಟು ಮಥನ ನಡೆಯಿತು. ಆದರೂ ಸದಾಶಿವಯ್ಯನವರಿಗೆ ಸಮಾಧಾನ ಉಂಟಾಗಲಿಲ್ಲ. ಇದನ್ನರಿತ ಶ್ರೀಗಳು ಸದಾಶಿವಯ್ಯನನ್ನ ಕರೆದು 'ನೀನು ಎಮ್ಮಿಗನೂರಿಗೆ ಹೋಗು. ಮಹಾಸಿದ್ಧಿ ಪುರುಷರಾದ ಜಡೆಸಿದ್ಧರಿದ್ದಾರೆ. ಅಲ್ಲಿ ನಿನ್ನ ಸಂಶಯಕ್ಕೆ ಪರಿಹಾರ ಸಿಕ್ಕೇ ಸಿಗುತ್ತದೆ' ಎಂದು ಅಪ್ಪಣೆ ಕೊಡಿಸಿದರು. ಶ್ರೀಗಳ ಅಪ್ಪಣೆಯಂತೆ ಎಮ್ಮಿಗನೂರಿಗೆ ಪಾದಯಾತ್ರೆ ನಡೆಯಿತು ಸದಾಶಿವಯ್ಯನವರಿಂದ. ಎಪ್ಪತ್ತು ಎಂಭತ್ತು ಮೈಲು ಪ್ರವಾಸ. ಹತ್ತೆಂಟು ದಿನದ ಈ ಕಾಲು ನಡಿಗೆಯ ಕಾಲದಲ್ಲಿ ಕೆರೆಬಾವಿಗಳು ಸಿಕ್ಕಾಗ ಸ್ನಾನ ಪೂಜೆ ತೀರಿಸಿಕೊಳ್ಳುವುದು, ಊರು ಸಿಕ್ಕಾಗ ಲಿಂಗವಂತ ಭಕ್ತರಲ್ಲಿ ಕಂತಿಭಿಕ್ಷೆ ಪ್ರಸಾದ. ಅಂತೂ ಒಮ್ಮೆ ಎಮ್ಮಿಗನೂರು ತಲುಪಿದರು.

ಇತ್ತ ಪರಮ ಸಿದ್ಧಿ ಪುರುಷರಾದ ಜಡೆಸಿದ್ಧರು ಓರ್ವ ಶಿವಯೋಗಿ ಇಲ್ಲಿಗೆ ದಯಮಾಡಿಸಲಿದ್ದಾನೆ–ಎಂಬುದನ್ನರಿತು ಎಂದಿಗಿಂತಲೂ ತಮ್ಮ ಮಠದಲ್ಲಿ ಹೆಚ್ಚಿನ ವ್ಯವಸ್ಥೆ ಮಾಡಿಸಿದರು. ಅಲ್ಲಿದ್ದ ಜನ ಮಹಿಮಾಪುರುಷನ ದರ್ಶನಕ್ಕೆ ಕಾದು ನಿಂತರು.

ಸದಾಶಿವಯ್ಯನವರು ಆಗಮಿಸಿದರು. ಎತ್ತರದ ನಿಲುವಿನ, ಆಜಾನುಬಾಹು, ಹೊಳಪು ಕಣ್ಣುಳ್ಳ, ಪ್ರಶಾಂತವಾದ ಮೊಗದ, ಎಣ್ಣೆಗಪ್ಪಿನ ತೇಜಸ್ವಿ ವೀರವಿರಾಗಿಯನ್ನು ಕಂಡ ಸಿದ್ಧರು ಮುಗುಳುನಗೆಸೂಸಿ, ಅವರು ಬಂದ ಉದ್ದೇಶವನ್ನು ತಮ್ಮ ತಪಸ್ಸಿನಿಂದ ಮೊದಲೇ ಅರಿತ ಜಡೆಸಿದ್ಧರು ವಸ್ತ್ರ ತೆಗೆದುಕೊಂಡು ಗಂಟುಹಾಕಿ ಕೊರಳಲ್ಲಿ ಧರಿಸಿಕೊಂಡರು. ಸದಾಶಿವಯ್ಯನವರು ಸಮೀಪ ಬಂದಕೂಡಲೇ

ತಾವೇ ಎದ್ದು ಕೈಜೋಡಿಸಿ ನಿಂತರು–ಸ್ವಾಗತಿಸಲು. ಸಿದ್ಧರ ಈ ವರ್ತನೆ ಕಂಡ ಜನತೆಗೆ ಅಚ್ಚರಿ. ಸದಾಶಿವಯ್ಯನವರು ಜಡೆಸಿದ್ಧರ ಕೊರಳಲ್ಲಿದ್ದ ಲಿಂಗವಸ್ತ್ರವನ್ನು ಕಂಡು ತನ್ನ ಸಂಶಯಕ್ಕೆ ಪರಿಹಾರ ಸಿಕ್ಕಿತೆಂದು ಆನಂದಭರಿತರಾಗಿ ಸಿದ್ಧರಿಗೆ ಸಾಷ್ಟಾಂಗ ನಮಸ್ಕಾರ ಮಾಡಿದರು. ಆಗ ಜಡೆಸಿದ್ಧರು ಆನಂದಬಾಷ್ಪ ಉದುರಿಸುತ್ತ 'ನೀನು ಶಿವಯೋಗಿ....ನೀನು ಶಿವಯೋಗಿ' ಎಂದು ಅಪ್ಪಣೆ ಕೊಡಿಸಿದರು. ಜಡೆಸಿದ್ಧರ ಸಿದ್ಧಿಗೆ ಸದಾಶಿವಯ್ಯನವರ ಮನ ಮಾರು ಹೋಯಿತು.

ತಮ್ಮ ಮುಂದಿನ ಮಾರ್ಗದ ಬಗ್ಗೆ ಕೇಳಿ ತಿಳಿಯಬೇಕೆಂದ ಸದಾಶಿವಯ್ಯನವರು 'ನಾನು ಇನ್ನು ಮುಂದೆ ಎಲ್ಲಿಗೆ ಹೋಗಬೇಕು' ಎಂದರು. ಅದಕ್ಕೆ ಸಿದ್ಧರು 'ಹುಬ್ಬಳ್ಳಿಗೇ ಹೋಗು!' ಎಂದು ಅಪ್ಪಣೆ ಮಾಡಿದರು. ಮಹಾತ್ಮರ ಅಪ್ಪಣೆ ಹಾಗೇ ಆಗಲಿ ಎಂದು ಕೆಲದಿನಗಳ ನಂತರ ಮತ್ತೆ ಹುಬ್ಬಳ್ಳಿಗೆ ಪಾದಯಾತ್ರೆಯಿಂದ ಮರಳಿದರು.

## ಪರಮಗುರುವಿನ ಸಾನ್ನಿಧ್ಯ

ಆ ಕಾಲದಲ್ಲಿ ಮಹಾ ಮಹಿಮಪುರುಷರೆಂದ ಕೀರ್ತಿ ಪಡೆದಿದ್ದ ಎಳಂದೂರು ಬಸವಲಿಂಗ ಮಹಾಸ್ವಾಮಿಗಳವರು ಲೋಕಸಂಚಾರ ಕೈಕೊಂಡು ಹುಬ್ಬಳ್ಳಿಗೆ ದಯಮಾಡಿಸಿದರು. ಸದಾಶಿವಸ್ವಾಮಿಗಳು ಆರೂಢದಲ್ಲಿದ್ದಾಗ ಎಳಂದೂರು ಶ್ರೀಗಳು ಆರೂಢರಲ್ಲಿಗೆ ದಯಮಾಡಿಸಿದರು. ಅವರೀರ್ವರಲ್ಲಿ ದ್ವೈತ, ವಿಶಿಷ್ಟಾದ್ವೈತ, ಶಕ್ತಿ ವಿಶಿಷ್ಟಾದ್ವೈತ, ನಿಜಗುಣರ ಶಾಸ್ತ್ರದ ಬಗ್ಗೆ ಚರ್ಚೆ ನಡೆಯಿತು. ಆ ಕಾಲದಲ್ಲಿ ಸದಾಶಿವಸ್ವಾಮಿಗಳು ಆರೂಢರ ಪರವಾಗಿ

ಕೆಲವು ಸಲ ಉತ್ತರ ನೀಡಿದರು. ಸದಾಶಿವಸ್ವಾಮಿಗಳ ಬುದ್ಧಿಕೌಶಲ್ಯ, ಪ್ರತಿಭೆಗೆ ಮೆಚ್ಚಿದ ಎಳಂದೂರು ಶ್ರೀಗಳು ಸಂಚಾರಕ್ಕೆಂದು ಹೊರಗೆ ಕರೆದುಕೊಂಡು ಹೋಗಿ ಅವರ ವಿಚಾರವಾಗಿ ಸವಿಸ್ತಾರ ತಿಳಿದುಕೊಂಡರು. ಎಳಂದೂರು ಶ್ರೀಗಳ ಬಗ್ಗೆ ಈ ಮೊದಲೇ ಕೇಳಿ ತಿಳಿದಿದ್ದ ಸದಾಶಿವಸ್ವಾಮಿ ಗಳಲ್ಲಿ ಅವರ ಬಗ್ಗೆ ಭಕ್ತಿ ನೆಲೆಯೂರಿತ್ತು. ಈಗ ಅದು ಬಲಿತು ಅವರ ಶಿಷ್ಯತ್ವಕ್ಕಾಗಿ ಹವಣಿಸಿತು. ಎಳಂದೂರು ಬಸವಲಿಂಗಸ್ವಾಮಿಗಳು ಪರಮ ಸಂತಸದಿಂದ ಸದಾಶಿವ ಸ್ವಾಮಿಗಳನ್ನು ಶಿಷ್ಯನೆಂದು ಅನುಗ್ರಹಿಸಿ ಪರಮಗುರು ಗಳಾದರು.

ಗುರುಶಿಷ್ಯರಿಬ್ಬರೂ ಸೇರಿ ನಾಡ ಸಂಚಾರ ಕೈಕೊಂಡರು. ಹೋದ ಹೋದಲ್ಲೆಲ್ಲ ಶಿವಾನುಭವ ಗೋಷ್ಠಿಗಳನ್ನು ನಡೆ ಯಿಸಿ, ಭಕ್ತ ಸಮುದಾಯಕ್ಕೆ ಶಿವಾನುಭವ ಬೋಧಿಸಿದರು. ಹೀಗೆ ಸಂಚಾರ ಮಾಡುತ್ತ ಮಾಡುತ್ತ ಅಣ್ಣಿಗೇರಿ ಮುಕ್ಕಾ ಮಿನಲ್ಲಿರುವಾಗ ಗುರುಗಳಾದ ಶ್ರೀ ಬಸವಲಿಂಗಸ್ವಾಮಿಗಳು ಅನಾರೋಗ್ಯಕ್ಕೆ ಈಡಾದರು. ಸದಾಶಿವಸ್ವಾಮಿಗಳು ಗುರು ವಿನ ಸೇವೆಯನ್ನು ಅಪಾರ ಶ್ರದ್ಧೆಯಿಂದ, ಭಕ್ತಿಯಿಂದ ಮಾಡಿದರು. ಆದರೂ ಗುರುಗಳ ಆರೋಗ್ಯ ಸುಧಾರಿಸದೆ ಹೋದಾಗ ಚಿಂತಾಕ್ರಾಂತರಾದರು. ಇದನ್ನು ತಿಳಿದ ಗುರು ಗಳು ಶಿಷ್ಯನನ್ನು ಹತ್ತಿರ ಕರೆದು ಧೈರ್ಯ ಹೇಳುತ್ತ, ನಿನ್ನಲ್ಲಿ ಯೋಗಶಕ್ತಿಯಿದೆ, ವೈರಾಗ್ಯತೆ ಇದೆ! ಕಾರ್ಯ ದಕ್ಷತೆಯಿದೆ, ಧೈರ್ಯದಿಂದ ಈ ಸಮಾಜ ಶಿಶುವನ್ನು ಜೋಪಾನ ಮಾಡಲು ಸಿದ್ಧನಾಗು. ನನ್ನ ಬಗ್ಗೆ ಚಿಂತೆಬೇಡ. ನಾನು ನಿನ್ನಿಂದ ಭಿನ್ನನಾಗಿಲ್ಲ. ನಾನು ನಿನ್ನಲ್ಲಿಯೇ ಇದ್ದೇನೆ" ಎಂದು ಅನುಗ್ರಹಿಸಿ ತಮ್ಮ ತಪಃಶಕ್ತಿಯನ್ನೆಲ್ಲ ಶಿಷ್ಯನಿಗೆ

ಧಾರೆಯೆರೆದು ಲಿಂಗೈಕ್ಯರಾದರು. ಅಣ್ಣಿಗೇರಿಯ ಶ್ರೀ ತೋಂಟದಾರ್ಯ ಮಠದಲ್ಲಿ ಕ್ರಿಯಾ ಸಮಾಧಿಗೊಳಿಸಿ, ಗುರುವಿನ ಅಣತಿಯನ್ನು ಮಸ್ತಕದಲ್ಲಿ ಧರಿಸಿ ಸದಾಶಿವ ಸ್ವಾಮಿಗಳು ಮುಂದಿನ ಮಾರ್ಗ ಕಂಡುಕೊಳ್ಳಲು ನಿಜ ಗುಣರ ತಪೋಭೂಮಿಯಾದ ಶಂಭುಲಿಂಗನ ಬೆಟ್ಟಕ್ಕೆ ಪಾದ ಯಾತ್ರೆ ಬೆಳೆಸಿದರು.

ಪ್ರಶಾಂತವಾದ, ಗಂಭೀರವಾದ, ಮಹಾಶಿವಯೋಗಿಯ ತಪಃ ಪ್ರಭಾವದಿಂದ ಬೆಳಗುವ ಶಂಭುಲಿಂಗನ ಬೆಟ್ಟದ ಗವಿಯೊಂದರಲ್ಲಿ, ಸದಾಶಿವಸ್ವಾಮಿಗಳು ಪದ್ಮಾಸನ ಹಾಕಿಕೊಂಡು ಲಿಂಗಾನುಷ್ಠಾನದಲ್ಲಿ ನಿರತರಾದರು. ಅದೆಷ್ಟೋ ಕಾಲ ಅನುಷ್ಠಾನ ನಡೆಯಿತು. ತಾವು ಅಲ್ಲಿ ಪಡೆದ ತಪಸ್ಸಿನ ಸಿದ್ಧಿಯನ್ನು ಸಮಾಜಕ್ಕೆ ನೀಡಲೆಂದು ಒಂದು ಸುಮುಹೂರ್ತದಲ್ಲಿ ಗವಿಯಿಂದ ಹೊರ ಹೊರಟರು.

ಪರಮ ತೇಜೋಮೂರ್ತಿ ಕಾಷಾಯಂಬರಧಾರಿಯನ್ನು ನೋಡಿದವರೆಲ್ಲ 'ಎಂಥ ತೇಜಸ್ಸು! ಏನೆಂಥ ವೈರಾಗ್ಯ!' ಎಂದು ಅಚ್ಚರಿಪಟ್ಟವರೇ. ಶ್ರೀಗಳು ಹೋದ ಹೋದಲ್ಲೆಲ್ಲ ಶಿಷ್ಯಕೋಟಿ ಬೆಳೆಯಿತು. ಶ್ರೀಗಳ ಮಾತು ಮುತ್ತಾಗಿ, ಮಾಣಿಕ್ಯವಾಗಿ ಜನಮನವನ್ನು ಬೆಳಗಿಸಿದವು. ಅವರ ನಡೆ, ನುಡಿ ಶಿವಮೆಚ್ಚಿ ಅಹುದಹುದೆನುವ ತೆರನಾಯ್ತು. ವೀರಶೈವ ಧರ್ಮದಲ್ಲಿ ಜಾಗೃತಿ ಶ್ರೀಗಳ ಸಂಚಾರದಿಂದಾಗಿ, ಪ್ರವಚನದಿಂದಾಗಿ ತಾನೇ ತಾನಾಗಿ ಉಂಟಾಗ ತೊಡಗಿತು, ಯುವಕ ಸ್ವಾಮಿಯ ಕೀರ್ತಿಯೂ ಪಸರಿಸ ತೊಡಗಿತು. ಹೀಗಿರಲು ಶ್ರೀಗಳು ಸಂಚಾರ ಮಾಡುತ್ತ ಮಾಡುತ್ತ ಸೊರಬ ಪ್ರಾಂತದ ಉಳವಿ ಗ್ರಾಮಕ್ಕೆ ದಯ

ಮಾಡಿಸಿದರು. ಅಲ್ಲಿಯು ಊರಿನ ಪ್ರಮುಖರು ಶ್ರೀಗಳು ತಮ್ಮಲ್ಲಿಯೇ ಇರಬೇಕೆಂದು ಒತ್ತಾಯಿಸಿದರು. ಭಕ್ತರ ಉತ್ಕಟವಾದ ಭಕ್ತಿಗೆ ಒಲಿದು, ಶ್ರೀಗಳು ಅಲ್ಲಿಯೇ ಕೆಲ ಕಾಲ ಅನುಷ್ಠಾನದಲ್ಲಿದ್ದರು.

ಇದೇ ಕಾಲದಲ್ಲಿಯೇ ಹಾನಗಲ್ಲ ಮಠಾಧಿಪತಿಗಳಾದ ಶ್ರೀ ಮ. ನಿ. ಪ್ರ. ಫಕೀರಸ್ವಾಮಿಗಳು ಓರ್ವ ಸಮರ್ಥ ಉತ್ತರಾಧಿಕಾರಿಯನ್ನು ಹುಡುಕುತ್ತಲಿದ್ದರು. ತಾವು ವಯೋವೃದ್ಧರಾದ್ದರಿಂದ ಉತ್ತರಾಧಿಕಾರಿಗೆ ಮಠವೊಪ್ಪಿಸಿ ತಾವು ಲಿಂಗಾನಂದದಲ್ಲಿರಬೇಕೆಂದು ಬಯಸಿದ್ದರು. ಸೊರಬ ಪ್ರಾಂತದಲ್ಲಿದ್ದ ಶ್ರೀ ಸದಾಶಿವಸ್ವಾಮಿಗಳ ಕೀರ್ತಿ ಅವರವರೆಗೂ ತಿಳಿಯಿತು. ಮಠದ ಭಕ್ತರನ್ನು, ಕಾರಭಾರಿಗಳನ್ನು ಅಲ್ಲಿಗೆ ಕಳಿಸಿ ಶ್ರೀ ಸದಾಶಿವಸ್ವಾಮಿಗಳನ್ನು ಬರಮಾಡಿಕೊಂಡರು. ಹಿರಿಯರ ಅಪ್ಪಣೆ ಮೀರಬಾರದೆಂದು ಶ್ರೀ ಸದಾಶಿವಸ್ವಾಮಿಗಳು ಬಂದರೇ ಹೊರತು ಮಠದ ಅಧಿಕಾರ ವಹಿಸಿಕೊಳ್ಳಲು ಅಲ್ಲ. ಬಂದ ಸದಾಶಿವಸ್ವಾಮಿಗಳು ಮುಪ್ಪಿನವರಾದ ಶ್ರೀ ನಿ. ಪ್ರ. ಫಕೀರಸ್ವಾಮಿಗಳಿಗೆ ಸಾಷ್ಟಾಂಗವೆರಗಿದರು. ಶ್ರೀಗಳು ತೇಜೋಮೂರ್ತಿಯಾದ ಸದಾಶಿವಸ್ವಾಮಿಗಳನ್ನು ಕಂಡು ಪರಮ ಹರ್ಷಿತರಾದರು. ಆನಂದ ತುಂದಿಲರಾದರು. ಮಠದ ಹಾಗೂ ಭಕ್ತರ ಪುಣ್ಯವೇ ಬಂದಂತೆ ಅವರಿಗೆನಿಸಿತು ಸದಾಶಿವಸ್ವಾಮಿಗಳ ರೂಪದಲ್ಲಿ. ಯಾವುದು ಬೇಡವೆಂದು ಸದಾಶಿವಸ್ವಾಮಿಗಳು ಅಲ್ಲಿಗೆ ಬಂದರೋ ಮಠದ ಶ್ರೀಗಳ ಹಾಗೂ ಭಕ್ತರ ಅಪಾರವಾದ ಒತ್ತಾಯಕ್ಕೆ ಕಟ್ಟುಬಿದ್ದು ಮಠಾಧಿಪತಿಯಾಗಲು ಒಪ್ಪಬೇಕಾಯಿತು. ಶ್ರೀ ಮ.ನಿ.ಪ್ರ. ಫಕೀರಸ್ವಾಮಿಗಳು

ವಿಧಿವತ್ತಾಗಿ ಶ್ರೀ ಸದಾಶಿವಸ್ವಾಮಿಗಳಿಗೆ ಉತ್ತರಾಧಿಕಾರತ್ವ ವಹಿಸಿಕೊಟ್ಟು ಸದಾಶಿವಸ್ವಾಮಿಗಳಿಗೆ ಶ್ರೀ ನಿ. ಪ್ರ. ಕುಮಾರಸ್ವಾಮಿ ಎಂದು ನಾಮಕರಣ ಮಾಡಿದರು.

## ಹಾನಗಲ್ಲ ವಿರಕ್ತ ಮಠ

ಹಾನಗಲ್ಲು ಕರ್ನಾಟಕದ ಬಹು ಪ್ರಾಚೀನ ಹಾಗೂ ಇತಿಹಾಸ ಪ್ರಸಿದ್ಧವಾದ ಸ್ಥಳ. ಧರ್ಮಾ ನದಿಯ ತೀರದ ಮೇಲೆ, ತನ್ನೆಲ್ಲ ಚೆಲುವನ್ನು ಸೂರೆಗೊಂಡಿರುವ, ಪ್ರಕೃತಿಯ ತೋಳತೆಕ್ಕೆಯಲ್ಲಿ ಹಾಯಾಗಿ ನೆಲೆಸಿರುವ ಈ ಗ್ರಾಮ ಚೆಲುವಿನಾಗರವಾಗಿದೆ. ಗದ್ದೆಗಳಲ್ಲಿ ಹಸಿರು ಹೊಡೆ ಮುರಿವ ಬತ್ತದ ಪಯಿರು, ಆಕಾಶಕ್ಕೆ ಗರಿಗೆದರಿ ನಿಂತಿರುವ ತೆಂಗಿನ ಮರಗಳು, ಎಲೆಬಳ್ಳಿಯ ತೋಟ ಪಚ್ಚೆಗಳು–ಈ ಎಲ್ಲ ಚೆಲುವೂ ಇಲ್ಲಿಯೇ ಇದೆ, ಸಮೃದ್ಧಿ ಇಲ್ಲಿಯೇ ಮನೆ ಮಾಡಿದೆ ಎಂದು ಸಾರುತ್ತಲಿವೆ.

ವಿರಾಟರಾಜನ ರಾಜಧಾನಿ ಇದೇ ಹಾನಗಲ್ಲಾಗಿತ್ತೆಂದು ಪುರಾಣಗಳಿಂದ ನಮಗೆ ತಿಳಿದುಬರುತ್ತದೆ. ಅಷ್ಟೇ ಏಕೆ ಕದಂಬರ ರಾಜಧಾನಿಯೂ ಇದೇ ಆಗಿತ್ತೆಂದು ಇತಿಹಾಸ ಸಾರುತ್ತಲಿದೆ. ಅದಕ್ಕೆ ಸಾಕ್ಷಿ ನುಡಿಯುತ್ತಲಿವೆ ಇಲ್ಲಿಯ ಪುರಾತನವಾದ ಕೋಟೆ–ಕೊತ್ತಲಗಳು, ಬುರುಜು, ದೇವಾಲಯಗಳು. ಎಲ್ಲವೂ ಗತವೈಭವದ ಕುರುಹಾಗಿ ನಿಂತಿವೆ.

ಇತಿಹಾಸ ಹಾಗೂ ಪುರಾಣ ಪ್ರಸಿದ್ಧವಾದ ಹಾನಗಲ್ಲಿನಲ್ಲಿ ಅಷ್ಟೇ ಪುರಾತನವಾದ ವಿರಕ್ತಮಠ ಒಂದಿದೆ. ಈ ವಿರಕ್ತಮಠದ ಉತ್ತರಾಧಿಕಾರವನ್ನು ವಹಿಸಿಕೊಂಡ ಶ್ರೀ ಸದಾಶಿವಸ್ವಾಮಿಗಳು ಹಾನಗಲ್ಲ ಕುಮಾರಸ್ವಾಮಿಗಳಾ

ದರು. ಇಲ್ಲಿಂದಲೇ ಶ್ರೀಗಳ ಭವ್ಯ ಜೀವನಕ್ಕೆ ನಾಂದಿಯಾಗುತ್ತದೆ. ಈ ವಿರಕ್ತಮಠದ ಅಧ್ಯಕ್ಷರಾಗಿ ಶ್ರೀ ಕುಮಾರಸ್ವಾಮಿಗಳು ಮಠ ಹಿಡಿದು ಕೂಡದೆ ಚರಜಂಗಮ ಮೂರ್ತಿಯಾಗಿ ನಾಡ ಸಂಚಾರಮಾಡತೊಡಗಿದರು. ಸಕಲ ಜೀವಾತ್ಮರ ಲೇಸಿಗಾಗಿ ತಮ್ಮನ್ನು ತಾವು ಅರ್ಪಿಸಿಕೊಂಡರು. ಅವರು ಚಲಿಸಿದಲ್ಲೆಲ್ಲ ತಂಗಾಳಿ ತೀಡಿತು. ಬೆಂದ ಮನಗಳು ಆರಳಿ ಘಮಘಮಿಸಿದವು. ಜನಮನದ ತಾಳಿಕೆ ಕಳೆಯಿತು.

ಹಾನಗಲ್ಲಿನಲ್ಲಿ ಪಾಠಶಾಲೆ, ಸಂಸ್ಕೃತ ಅಧ್ಯಯನದ ವ್ಯವಸ್ಥೆಗೊಳಿಸಿದರು. ಆದರೆ ಇಷ್ಟರಿಂದಲೇ ಅವರಿಗೆ ತೃಪ್ತಿಯಾಗಲಿಲ್ಲ. ಸಮಾಜದ, ಧರ್ಮದ ಸರ್ವತೋಮುಖವಾದ ಏಳ್ಗೆಗಾಗಿ ಬೃಹತ್ ಯೋಜನೆ ಹಮ್ಮಿಕೊಳ್ಳಬೇಕೆಂಬ ಆಸೆ ಅವರಿಗಿತ್ತು. ಅದಕ್ಕೆ ಪೂರಕವೆಂಬಂತೆ ಒಂದು ಘಟನೆ ನಡೆಯಿತು. ಇದೇ ರೀತಿಯಲ್ಲಿ ಚಿಂತನಶೀಲರಾದ ಬಾಗಲಕೋಟೆಯ ವೈರಾಗ್ಯದ ಮಲ್ಲಣಾರ್ಯರು ಹಾನಗಲ್ಲ ಕುಮಾರಸ್ವಾಮಿಗಳ ತಪಸ್ಸಿನ ಬಗ್ಗೆ, ಸಮಾಜ ಹಾಗೂ ಧರ್ಮದ ಬಗ್ಗೆ ಅವರಲ್ಲಿರುವ ಕಳಕಳಿಯ ಬಗ್ಗೆ ಕೇಳಿ ತಿಳಿದಿದ್ದರು. ಅವರು ಹಾನಗಲ್ಲಿಗೆ ಶ್ರೀಗಳ ದರ್ಶನಕ್ಕಾಗಿ ಬಂದರು. ಮಲ್ಲಣಾರ್ಯರು ಬಂದಾಗ ಶ್ರೀಗಳು ಮಠದಲ್ಲಿದ್ದ ಮರದ ತೂಗು ಮಂಚದ ಮೇಲೆ ಮುಹೂರ್ತ ಮಾಡಿದ್ದರು. ಮಲ್ಲಣಾರ್ಯರ ವೈರಾಗ್ಯದ ಬಗ್ಗೆ ಶ್ರೀಗಳು ಕೇಳಿದ್ದರು. ಆದರೆ ಅವರನ್ನು ನೋಡಿರಲಿಲ್ಲ. ಮಲ್ಲಣಾರ್ಯರು ಬಂದು "ಈ ಮಠದ ಶ್ರೀಗಳು ಎಲ್ಲಿ ?" ಎಂದರು.

"ಇಲ್ಲಿಯ ಭಕ್ತರು ಇವರಿಗೆ ಈ ಮಠದ ಸ್ವಾಮಿಗಳೆಂದು ಹೇಳ್ತಾರ್ರಿಪಾ" ಎಂದು ಅಪ್ಪಣೆ ಕೊಡಿಸಿದರು.

ವೈರಾಗ್ಯದ ಮಲ್ಲಣಾರ್ಯರು ಈ ಉತ್ತರ ಕೇಳಿ ವ್ಯಂಗ್ಯವಾಗಿ–

"ತಾವು ವಿರಕ್ತಸ್ವಾಮಿಗಳೇನ್ರಪಾ ? ತಮಗೆ ಈ ತೂಗುಮಂಚದ ವ್ಯಾಮೋಹ ಯಾಕ್ರಪಾ ?" ಎಂದರು.

ಆಗ ಶ್ರೀಗಳು :

"ತಾವು ಯಾರ್ರಪಾ ?"

"ಇವನಿಗೆ ಮಲ್ಲಣಾರ್ಯ ಅಂತಾರ ಬುದ್ಧಿ" ಆಗ ಶ್ರೀಗಳು ಆನಂದದಿಂದ,

"ನಿಮ್ಮ ಹಾದಿ ಕಾಯುತ್ತಲಿದ್ದ. ಹೇಳ್ರಿಪಾ ಸಮಾಜ. ಧರ್ಮದ ಪುನರುತ್ಥಾನಕ್ಕಾಗಿ ಏನೇನು ಯೋಚನೆ ಮಾಡೀರಿ. ನೀವು ಕಾರ್ಯಕ್ರಮ ಸಿದ್ಧಮಾಡ್ರಿ. ಕಾರ್ಯವನ್ನು ಪೂರ್ತಿಗೊಳಿಸುವುದನ್ನು ನಮಗ ಬಿಡ್ರಿ. ಸದಾ ಅದೇ ಚಿಂತೆಯಲ್ಲಿರುವ ನಮಗ ಮಠ, ತೂಗುಮಂಚದ ಚಿಂತೆಯಲ್ಲಿ? ನೀವು ಬಂದಿರಿ. ಇನ್ನು ಕಾರ್ಯ ಆರಂಭವಾಗ್ತಾವ" ಎಂದು ಅಪ್ಪಣೆ ಕೊಡಿಸಿದರು.

ಈ ಘಟನೆ ಹಾಗೂ ಗುರುಗಳಾದ ಎಳಂದೂರು ಬಸವಲಿಂಗಸ್ವಾಮಿಗಳು ಹಗಲೆಲ್ಲ ಅಪ್ಪಣೆ ಕೊಡಿಸುತ್ತಿದ್ದ 'ಯೋಗಮಂದಿರ' ಸ್ಥಾಪನೆಯ ವಿಚಾರ ಎಲ್ಲವೂ ಸೇರಿ 'ಶಿವಯೋಗಮಂದಿರ'ದ ಸ್ಥಾಪನೆಯ ಅಂಕುರ ಮೊಳೆಯಿತು.

## ವೀರಶೈವ ಮಹಾಸಭೆ

ಇದಕ್ಕೂ ಮುನ್ನವೇ ಸಾವಿರದೊಂಬೈನೂರನಾಲ್ಕರಲ್ಲಿ ವೀರಶೈವ ಜನಾಂಗದ ಧಾರ್ಮಿಕ, ಸಾಮಾಜಿಕ, ಶೈಕ್ಷಣಿಕ ಆರ್ಥಿಕ ಅಭಿವೃದ್ಧಿಗಾಗಿ ಅಖಿಲ ಭಾರತ ಮಟ್ಟದ ಒಂದು

ಮಹಾಸಭೆ ಅವಶ್ಯವೆಂದು ತಿಳಿದ ಶ್ರೀಗಳು 'ಅಖಿಲಭಾರತ ವೀರಶೈವ ಮಹಾಸಭೆ' ಎಂಬ ಸಂಸ್ಥೆಯನ್ನು ನಾಡಿನ ಪ್ರಮುಖರ ಸಹಾಯ ಸಹಕಾರಗಳೊಂದಿಗೆ ಸ್ಥಾಪಿಸಿದ್ದರು.

ಧಾರವಾಡದಲ್ಲಿ ಇದರ ಪ್ರಥಮ ಅಧಿವೇಶನ ನಡೆಯಿತು. ಅದೇ ಸಮಯದಲ್ಲಿ ಶ್ರೀಗಳು 'ಲಿಂಗಾಯತ ವಿದ್ಯಾವರ್ಧಕ ಫಂಡ'ನ್ನು ಸ್ಥಾಪಿಸಿ ಅದರ ಮುಖಾಂತರ ಲಿಂಗಾಯತ ಬಡ ವಿದ್ಯಾರ್ಥಿಗಳ ವಿದ್ಯಾರ್ಜನೆಗೆ ಸಹಾಯಕವಾಗುವಂತೆ ವ್ಯವಸ್ಥೆ ಮಾಡಿದರು. ಇಂಥ ಕಾರ್ಯಗಳ ಹಿಂದೆ ತಾವು ಬಡತನದಿಂದಾಗಿ ವಿದ್ಯಾಭ್ಯಾಸ ನಿಲ್ಲಿಸುವಂತಾದುದನ್ನು ನೆನಪಿಸಿ ಸಮಾಜದ ಇನ್ನುಳಿದ ಬಡ ವಿದ್ಯಾರ್ಥಿಗಳೂ ಅಂಥ ಕಷ್ಟಕ್ಕೆ ಗುರಿಯಾಗದಿರಲಿ–ಎಂಬ ಮನೀಷೆ ಶ್ರೀಗಳದಾಗಿರುತ್ತಿತ್ತು. ಈಗಲೂ ಈ ಫಂಡಿನಿಂದ ಬಡ ವಿದ್ಯಾರ್ಥಿಗಳು ಆರ್ಥಿಕ ಸಹಾಯ ಪಡೆಯುತ್ತಿದ್ದಾರೆ.

ನಾಡಿನಲ್ಲಿ, ಸಮಾಜದಲ್ಲಿ ಬದಲಾವಣೆಯಾಗುತ್ತಿರುವುದನ್ನು ಕಂಡ ಶ್ರೀಗಳು ಲಿಂಗಾಯತರು ಇಂಗ್ಲೀಷ ಶಿಕ್ಷಣವನ್ನು ಪಡೆಯಲು ಅನುಕೂಲವಾಗುವಂತೆ ಈ ಫಂಡಿನಿಂದ ವ್ಯವಸ್ಥೆ ಮಾಡಿದರು.

ಎರಡನೆಯ ಮಹಾಸಭೆ ಬೆಂಗಳೂರಿನಲ್ಲಿ ನಡೆಯಿತು. ಆಗ ಮೈಸೂರು ಸಂಸ್ಥಾನದ ಲಿಂಗಾಯತರ ವಿದ್ಯಾಭಿವೃದ್ಧಿಗಾಗಿ ಅಲ್ಲಿಯೂ ಇಂಥ ವಿದ್ಯಾವರ್ಧಕ ಫಂಡೊಂದನ್ನು ಸ್ಥಾಪಿಸಿ ಬಡವಿದ್ಯಾರ್ಥಿಗಳಿಗೆ ಅನುಕೂಲ ಒದಗಿಸಿದರು. ವೀರಶೈವ ಮಹಾಸಭೆ ಸಮಾಜದ ಸರ್ವತೋಮುಖ ಏಳ್ಗೆಗಾಗಿ ಸಾಕಷ್ಟು ಕೆಲಸ ಮಾಡಿತು. ಶ್ರೀಗಳು ನಾಡನ್ನೆಲ್ಲ ಸಂಚರಿಸಿ ಹೋದ ಹೋದಲ್ಲೆಲ್ಲ ಸಭೆ, ಸಮ್ಮೇಳನಗಳನ್ನು ಮಾಡಿ, ಪಾಠಶಾಲೆಗಳನ್ನು, ಉಚಿತ ಪ್ರಸಾದ ನಿಲಯ



ಹಾನಗಲ್ಲ ವಿರಕ್ತಮಠ



ಲತಾಮಂಟಪದಲ್ಲಿ ಅಧ್ಯಯನ ನಿರತ ಸಾಧಕರು






ಯೋಗಾಭ್ಯಾಸ



ಸಾಧಕರ ವಸತಿ ಮಂದಿರ (ಮೇಲುಮಠ)



ಹಾನಗಲ್ಲ ಶ್ರೀ ಕುಮಾರಸ್ವಾಮಿಗಳ ಗದ್ದುಗೆ



ಪೂಜೆಗೆ ಪತ್ರೆ, ಪುಷ್ಪ ಎತ್ತುತ್ತಿರುವ ಸಾಧಕರು



ಬನಶಂಕರಿ ದೇವಾಲಯ ಹಾಗೂ ಪುಷ್ಕರಣಿ



ಮಲಾಪಹಾರಿ ನದಿಯ ಸುಮನೋಹರ ದೃಶ್ಯ



ಲಿಂ. ಹಾನಗಲ್ಲ ಕುಮಾರಸ್ವಾಮಿಗಳವರ ಗದ್ದುಗೆಯ ಎದುರಿನಲ್ಲಿ ಹಾನಗಲ್ಲ ಶ್ರೀ ನಿ.ಪ್ರ. ಸದಾಶಿವಸ್ವಾಮಿಗಳು ಸಾಧಕರೊಂದಿಗೆ



ಮೂರು ಸಾವಿರ ಮಠದ ಇಂದಿನ ಜಗದ್ಗುರುಗಳು ಹಾಗೂ ಶಿವಯೋಗ ಮಂದಿರದ ಅಂದಿನ ಸಾಧಕರಾದ ಶ್ರೀ ಮ.ನಿ. ಜಗದ್ಗುರು ಶ್ರೀ ಗಂಗಾಧರರಾಜ ಯೋಗೀಂದ್ರ ಮಹಾಸ್ವಾಮಿಗಳು ಶಿವಯೋಗ ಮಂದಿರದಲ್ಲಿ ಕಟ್ಟಿಸಿದ ಧ್ಯಾನಧಾಮ.



ಮಹಾಕೂಟೇಶ್ವರ ಮಂದಿರ



ಶ್ರೀ ಕೊಟ್ಟೂರ ಸ್ವಾಮಿಗಳ ಸ್ಮಾರಕ ಗದ್ದುಗೆ

ಗಳನ್ನು ವಾಚನಾಲಯುಗಳನ್ನು ಸ್ಥಾಪಿಸಿದರು. ಸಮಾಜದಲ್ಲಿ ಜಾಗೃತಿಯನ್ನು ಉಂಟುಮಾಡಿದರು. ಈ ನಾಡಿನ ಸಂಸ್ಕೃತಿ ಇತಿಹಾಸ, ಸಾಹಿತ್ಯದ ಬಗ್ಗೆ ಜನರಲ್ಲಿ ಅಭಿರುಚಿ ಹುಟ್ಟಿಸಿದರು. ಶ್ರೀಗಳವರಿಗೆ ಇದರಿಂದ ಸಂತಸ ಉಂಟಾಗಿತ್ತು. ಆದರೆ ಸಮಾಜದ ಬಗ್ಗೆ ಶ್ರೀಗಳವರಲ್ಲಿದ್ದ ಕಳಕಳಿ ಬೇರೆಯುವರಲ್ಲೂ ಆದೇ ಪ್ರಮಾಣದಲ್ಲಿದ್ದಿದ್ದರೆ ಮಹಾಸಭೆಯಿಂದ ಇನ್ನೂ ಹೆಚ್ಚಿನ ಕೆಲಸವಾಗಬಹುದಿತ್ತು. ಈ ಸಂಸ್ಥೆಯು ಅಧ್ಯಕ್ಷಪೀಠವನ್ನು ಮಹಾ ಮಹಿಮಾಶಾಲಿಗಳು, ರಾಷ್ಟ್ರಮಟ್ಟದ ನಾಯಕರು ವಹಿಸಿ ದುಡಿದಿದ್ದಾರೆ.

ಈಗ ಈ ಸಂಸ್ಥೆಯು ಅಧ್ಯಕ್ಷಪೀಠದಲ್ಲಿ ಶ್ರೀ ಸಿದ್ಧಗಂಗಾ ಕ್ಷೇತ್ರದ ದಾಸೋಹಮೂರ್ತಿಗಳೂ, ಘನ ವಿದ್ವಾಂಸರೂ ಆದ ಡಾ|| ಶ್ರೀ ನಿ. ಪ್ರ. ಶಿವಕುಮಾರಸ್ವಾಮಿಗಳಿದ್ದಾರೆ.

## ಶಿವಯೋಗಮಂದಿರ

ವೀರಶೈವ ಮಹಾಸಭೆಯೊಂದರಿಂದಲೇ ಹಾನಗಲ್ಲ ಕುಮಾರಸ್ವಾಮಿಗಳಿಗೆ ತೃಪ್ತಿಯಾಗಿರಲಿಲ್ಲ.

ಒಂದು ಪ್ರಶಾಂತವಾದ 'ಬಯಲಿ'ನಲ್ಲಿ, ಪ್ರಕೃತಿಯ ಉಡಿಯಲ್ಲಿ ಮಹಾ ಸಂಸ್ಥೆಯೊಂದನ್ನು ಸ್ಥಾಪಿಸಬೇಕೆಂಬ ಬಯಕೆ. ಗುರುಗಳ ಇಚ್ಛೆಯಾಗಿದ್ದ ಶಿವಯೋಗ ಶಿಕ್ಷಣವನ್ನೀಯುವ ಗುರುಕುಲ ನಿರ್ಮಿಸಬೇಕೆಂಬ ಇಚ್ಛೆ ಬಲವತ್ತರವಾಗಿತ್ತು ಹಾನಗಲ್ಲ ಶ್ರೀಗಳಲ್ಲಿ. ಈ ಇಚ್ಛೆಗೆ ನೀರೆರೆದು ಪಲ್ಲವಿಸುವಂತೆ ಮಾಡಿದವರು ವೈರಾಗ್ಯದ ಮಲ್ಲಣಾರ್ಯರು. ಈ ಕಾರ್ಯ ಸಾಧನೆಗಾಗಿ ಅವರು ಜೋಳಿಗೆ ಹಾಕಿ ಭಿಕ್ಷೆಗೆ ಹೋಗುವುದಾಗಿ ಹೇಳಿದ್ದರು. ಆದರೆ ಈ ಕಾರ್ಯ

ಆರಂಭವಾಗುವ ಮುನ್ನವೇ ಮಲ್ಲಣಾರ್ಯರು ಲಿಂಗದೊಳಗಾದರು. ಆದರೆ ಅವರ ಸದಿಚ್ಛೆ ಪ್ರಭಾಪುಂಜವಾಗಿತ್ತು ಶ್ರೀಗಳಲ್ಲಿ. ಹಾನಗಲ್ಲ ಶ್ರೀಗಳು ಹತಾಶರಾಗದೆ ಅನಂತಪುರ ಕೆಳದಿಯಲ್ಲಿ ಸಾಂಗಗೊಂಡ ಮಂಟಪಪೂಜೆಯ ಕಾಲದಲ್ಲಿ ಹಾವೇರಿ ಶ್ರೀಗಳೊಡನೆ ವಿಚಾರವಿನಿಮಯ ಮಾಡಿ ಶಿವಯೋಗ ಮಂದಿರ ಸ್ಥಾಪನೆಗಾಗಿ ಭಿಕ್ಷಾಟನಕ್ಕೆ ಹೊರಡುವುದಾಗಿ ನಿಶ್ಚಯಿಸಿದರು.

ಸಾವಿರದೊಂಬೈನೂರಾ ಎಂಟರಲ್ಲಿ ಬಾಗಲಕೋಟಿಯಲ್ಲಿ ನಡೆದ ವೀರಶೈವ ಮಹಾ ಸಭೆಯ ಅಧಿವೇಶನದಲ್ಲಿ, ಶಿವಯೋಗ ಮಂದಿರದ ಸ್ಥಾಪನೆಗೆ ಆದ್ಯತೆ ನೀಡಲಾಯಿತು. ವೈರಾಗ್ಯದ ಮಲ್ಲಣಾರ್ಯರ ಊರಾದ ಬಾಗಲಕೋಟೆಯಲ್ಲಿಯೇ ಮಂದಿರಸ್ಥಾಪನೆಯ ನಿರ್ಣಯವಾದುದು ಯೋಗಾಯೋಗವಲ್ಲದೆ ಮತ್ತೇನು! ಮಹಿಮರ ಸಂಕಲ್ಪಗಳೇ ಹಾಗೆ.

ವೀರಶೈವ ಮಹಾಸಭೆಯ ಕಾರ್ಯಕಾರಿಣಿ ಸಮಿತಿಯು ಮಹಾತಪೋಧನರಾದ ಇಳಕಲ್ಲ ಶ್ರೀ ಮ. ನಿ. ಪ್ರ. ಮಹಾಂತಸ್ವಾಮಿಗಳು ಅಪ್ಪಣೆಕೊಡಿಸುವ ಸ್ಥಳದಲ್ಲಿ ಮಂದಿರ ಸ್ಥಾಪಿಸಬೇಕೆಂದು ನಿರ್ಣಯಿಸಿತು.

ಹಾನಗಲ್ಲ ಕುಮಾರಸ್ವಾಮಿಗಳು ಆ ಕೂಡಲೇ ಇಳಕಲ್ಲಿಗೆ ಹೋಗಿ ಎಲ್ಲ ವಿಷಯವನ್ನು ತಪಸ್ವಿಗಳ ಸನ್ನಿಧಿಯಲ್ಲಿ ಅರಿಕೆ ಮಾಡಿಕೊಂಡು, ಸ್ಥಳಾನ್ವೇಷಣೆಗಾಗಿ ಮಹಾಸ್ವಾಮಿಗಳನ್ನು ಕರೆದುಕೊಂಡು ಹೊರಟರು. ಶ್ರೀಗಳ ಜೊತೆಗೆ ಆರ್ಟಾಳರುದ್ರಗೌಡರು, ಕಿತ್ತೂರ ರೇವಣ್ಣಸಿದ್ಧಪ್ಪನವರು. ಸುತ್ತಲಿನ ನಗರಗಳಿಂದ ಮಹಾಸಭೆಗೆ ಬಂದಿದ್ದ ಕೆಲ ವೀರಶೈವ ಪ್ರಮುಖರು ಹಾಗೂ ಪರಮ ತಪಸ್ವಿ

ಗಳಾದ ಮಹಾಂತಸ್ವಾಮಿಗಳ ಜೊತೆಗಿರುವ ಹಸು 'ಮಹಾಂತಮ್ಮ'.

ಇತಿಹಾಸಕ್ಕೆ ಹಾಗೂ ಶಿಲ್ಪಕ್ಕೆ ಸುಪ್ರಸಿದ್ಧವಾದ ಐಹೊಳೆಗೆ ಐತಂದರು. ಕೆಲವರು ಶಿವಯೋಗ ಮಂದಿರಕ್ಕೆ ಇದು ತಕ್ಕ ಸ್ಥಳವೆಂದರು. ಆದರೆ ಇಳಕಲ್ಲ ತಪಸ್ವಿಗಳು ಒಪ್ಪಲಿಲ್ಲ. ಅಲ್ಲಿಂದ ಪಟ್ಟದಕಲ್ಲಿಗೆ ಬಂದರು. ಅದು ಆದೀತೆಂದು ಕೆಲವರು. ಅದನ್ನೂ ಶ್ರೀಗಳು ಒಪ್ಪಲಿಲ್ಲ. ಗುಡಿಯೊಂದರಲ್ಲಿದ್ದ ಕರಿ ನಾಗರವನ್ನು ತೋರಿಸಿ ಶಿವಯೋಗಕ್ಕೆ ತಕ್ಕ ಸ್ಥಳವಲ್ಲವೆಂದರು. ಹಾನಗಲ್ಲ ಶ್ರೀಗಳು ಮುಂದೆ ಯಾರೂ ತಮ್ಮ ಇಚ್ಛೆಯನ್ನು ಪ್ರಕಟಿಸಕೂಡದೆಂದು ಹೇಳಿ, ಇಳಕಲ್ಲ ತಪಸ್ವಿಗಳೇ ಸ್ಥಳನಿರ್ದೇಶನ ಮಾಡಲಿ ಎಂದರು. ತಮ್ಮ ಹಸು 'ಮಹಾಂತಮ್ಮ' ನನ್ನು ಮುಂದೆ ಬಿಟ್ಟುಕೊಂಡು ಇಳಕಲ್ಲ ಶ್ರೀಗಳು ಹಿಂದೆ ಹಿಂದೆ ಹೊರಟರು. ಮಲಾಪಹಾರಿ ನದಿಗುಂಟ ಹೊರಟ ಹಸು ಘನ ನಿಬಿಡವಾದ ಅರಣ್ಯವನ್ನು ಹೊಕ್ಕಿತು. ಎಲ್ಲರೂ ಅದರ ಹಿಂದೆ ಹಿಂದೆಯೇ ನಡೆದರು. ಹಸು ಮುಂದೆ ಮುಂದೆ ನಡೆಯಿತು. ಅದನ್ನು ಅನುಸರಿಸಿ ಉಳಿದವರೂ ಸಾಗಿದರು. ಕೆಲಹೊತ್ತು ಹೀಗೆಯೇ ನಡೆದು ಅರಣ್ಯದ ಮಧ್ಯದಲ್ಲಿ ತೂರಿಬರುವ ಸೂರ್ಯನ ಬೆಳಕಿನಲ್ಲಿ ಹಸು ಮುಂದೆ ಹೋಗದೆ ನಿಂತಿತು. ಸ್ವಲ್ಪ ಹೊತ್ತಿನ ನಂತರ ಹಿಂದಿನಿಂದ ಅಲ್ಲಿಗೆ ಬಂದ ಶ್ರೀಗಳು ಉಳಿದವರು ಹಸುನಿಂತಲ್ಲಿ ಒಂದು ಚಿಕ್ಕದಾದ ಗದ್ದುಗೆ ಇರುವುದನ್ನು ಕಂಡರು. ಈ ಗುಂಪಿನ ಜೊತೆಗೆ ಸ್ಥಳಿಕ ನೆಲವಿಗಿಯ ಅಂಗಡಿ ಫಕೀರಪ್ಪನೆಂಬ ವೃದ್ಧನೂ ಇದ್ದ. ಇಳಕಲ್ಲ ಶ್ರೀಗಳು ಆ ಮುದುಕನನ್ನು ಗದ್ದುಗೆಯ ಬಗ್ಗೆ ವಿಚಾರಿಸಿದರು. ಆಗ ಆ ವೃದ್ಧ "ಬುದ್ಧಿ, ಈ ಗದ್ದುಗೆಗೆ ನಮ್ಮ ಹಿರಿ

ಯರು ಕೊಟ್ಟೂರೇಶ್ವರನ ಗದ್ದುಗೆ ಎಂದು ಹೇಳುತ್ತಿದ್ದರು. ಇಂಥ ಅರಣ್ಯದಲ್ಲಿದ್ದರೂ ಸುತ್ತಲಿನ ಜನ ಈ ಗದ್ದುಗೆಗೆ ಈಗಲೂ ನಡೆದುಕೊಳ್ಳುತ್ತಾರೆ" ಎಂದ. ಹಸು ಅಲ್ಲಿಯೇ ಮಲಗಿತು. ಆಗ ಮಹಾಂತಸ್ವಾಮಿಗಳು—

"ಮಹಾಂತಮ್ಮ ಮಂದಿರದ ಸ್ಥಾಪನೆ ಇಲ್ಲಿಯೇ ಆಗಲಿ ಎನ್ನುತ್ತಾಳೆ. ಇಲ್ಲಿಯೇ ಸ್ಥಾಪಿಸೋಣ" ಎಂದಪ್ಪಣೆ ಮಾಡಿದರು. ಆದರೆ ಕೆಲ ಜನ ಈ ಘೋರಾರಣ್ಯದಲ್ಲಿ! ಬೇಡವೆಂದರು. ಆದರೆ ಹಾನಗಲ್ಲ ಶ್ರೀಗಳು "ತಪಸ್ವಿಗಳ ಅಪ್ಪಣೆಯಾಗಿದೆ. ಶಿವಯೋಗ ಮಂದಿರ ಇಲ್ಲಿಯೇ ಸ್ಥಾಪಿಸಲಾಗುವುದು. ಬೇಡವಾದವರು ಬಿಡಲಿ. ನಾನೊಬ್ಬನೇ ಆದರೂ ಸರಿ, ಶಿವಯೋಗ ಮಂದಿರ ಇಲ್ಲಿಯೇ ತಲೆಯೆತ್ತಿ ನಿಲ್ಲುತ್ತದೆ" ಎಂದರು. ಶ್ರೀಗಳ ವೀರಕಂಠಕ್ಕೆ ಉಳಿದವರೂ ತಲೆಬಾಗಿದರು. ಕೆಲಹೊತ್ತಿನ ನಂತರ ಹಸು ಎದ್ದು ಅಲ್ಲಿಂದಹೊರಟು ನದಿ ತೀರದ ಸಮೀಪ ಬಂತು. ಅಲ್ಲಿ ಪತ್ರಿ ಬನವೇ ಇತ್ತು. ಅದನ್ನು ಕಂಡ ನಂತರವಂತೂ ಎಲ್ಲರಿಗೂ ಪರಮಾನಂದವಾಯಿತು.

ಆಗ ಹಾನಗಲ್ಲ ಕುಮಾರಸ್ವಾಮಿಗಳು ಇಳಕಲ್ಲ ಮಹಾಮಹಿಮರಲ್ಲಿ "ಮಹಾಸನ್ನಿಧಿ ತೋರಿದ ಈ ಸ್ಥಳದಲ್ಲಿಯೇ ಮಂದಿರ ಸ್ಥಾಪನೆಯಾಗುತ್ತದೆ. ಲಿಂಗ ಮುದ್ರೆ ಕಲ್ಲಿನ ಸ್ಥಾಪನೆ ಅಡಿಗಲ್ಲು ಸಮಾರಂಭ ಶ್ರೀಗಳ ಅಮೃತ ಹಸ್ತದಿಂದಲೇ ನೆರವೇರಬೇಕು" ಎಂದು ಬಿನ್ನವಿಸಿಕೊಂಡರು. ಆಗ ಇಳಕಲ್ಲ ಶ್ರೀಗಳು "ಆಗಲಿ. ಇದೇ ಮಾಘಶುದ್ಧ ರಥ ಸಪ್ತಮಿ ದಿನದಂದು ಮುಹೂರ್ತವಿಟ್ಟುಕೊಳ್ಳಿ, ಅಷ್ಟರೊಳಗಾಗಿ ಎಲ್ಲ ಸಿದ್ಧತೆ ನಡೆಯಲಿ. ಇದು ಪರಮ ಪವಿತ್ರ ಸ್ಥಳ. ಬಿಲ್ವ ವನವಿದೆ. ಹಿಂದೆ ಪುರಾತನರು, ಋಷಿ ಮುನಿ

ಗಳು ಇದ್ದ ಸ್ಥಳವಿದು. ಕೊಟ್ಟೂರ ಮಹಾಸ್ವಾಮಿಗಳು ಅನುಷ್ಠಾನಗೈದ ಪುಣ್ಯಭೂಮಿ ಇದು. ಮಂಗಲವಾಗಲಿ" ಎಂದಪ್ಪಣೆ ಕೊಡಿಸಿದರು.

ಶಿವಯೋಗ ಮಂದಿರ ಮಾಘಶುದ್ಧ ರಥಸಪ್ತಮಿ ಯಂದು ಇಳಕಲ್ಲ ಶ್ರೀಗಳ ಅಮೃತ ಹಸ್ತದಿಂದ ಸ್ಥಾಪನೆ ಗೊಂಡಿತು. ಅಂದಿದ್ದ ಕಾಡು, ಅರಣ್ಯ ಇಂದು ಶ್ರೀಗಳ ಕೃಪೆಯಿಂದ ನಂದನವಾಗಿದೆ.

ನೂರಾರು ವಟುಗಳು, ಸಾಧಕರು, ದೇವರು ಕಾಷಾ ಯಂಬರಧಾರಿಗಳಾಗಿ ತಪದಲ್ಲಿ, ಪೂಜೆಯಲ್ಲಿ, ಕಾಯಕದಲ್ಲಿ ನಿರತರಾಗಿರುವ ಅಲೌಕಿಕ ದೃಶ್ಯವನ್ನು ನೋಡುವುದೊಂದು ಪರಮ ಭಾಗ್ಯವೇ ಸರಿ. ಶಿವರಾತ್ರಿಯಲ್ಲಿ ಮಾತ್ರ ಹೂ ಬಿಡುವ ಬೆಟ್ಟದಾವರೆ ವೃಕ್ಷಗಳದೇ ಒಂದು ವಿಶಿಷ್ಟತೆ ಇಲ್ಲಿ.

ವಿರಕ್ತ ಮಠಗಳಿಗೆ, ಗುರುಪೀಠಗಳಿಗೆ ಬೇಕಾಗುವ ಮರಿದೇವರುಗಳ ಸಾಧನೆ, ವಿದ್ಯಾಭ್ಯಾಸ, ಶಿವಯೋಗ ಸಿದ್ಧಿ ಇಲ್ಲಿ ನಡೆಯುತ್ತದೆ. ಬಾಲ್ಯದಿಂದಲೇ ಇಂಥ ವಾತಾವರಣ ದಲ್ಲಿ ಬೆಳೆದು ಪ್ರಬುದ್ಧರಾದ ಸ್ವಾಮಿಗಳಿಂದ ವೀರಶೈವ ಧರ್ಮಪೀಠಗಳು ಬೆಳಗಬಲ್ಲವು, ಧರ್ಮ ಸದಾ ಜಾಗೃತವಾಗಿ ರಬಲ್ಲದು ಎಂಬ ಹಾನಗಲ್ಲ ಶ್ರೀಗಳ ಉದ್ದೇಶವೇ, ಈ ಶಿವ ಯೋಗ ಮಂದಿರದ ಸ್ಥಾಪನೆಯ ಉದ್ದೇಶ.

ವಿಶಾಲವಾದ ಈ ಕ್ಷೇತ್ರದಲ್ಲಿ ಒಂದೆಡೆ ಗೋಶಾಲೆ ಇದೆ. ನೂರಾರು ಹಸುಗಳಿವೆ ಇಲ್ಲಿ, ಇನ್ನೊಂದೆಡೆ ಭಸ್ಮ ಸಿದ್ಧಗೊಳಿ ಸುವ ಕಾರ್ಯಾಲಯವಿದೆ, ಮತ್ತೊಂದೆಡೆ ಪುರಾತನ ತಾಡೋಲೆ ಗ್ರಂಥಗಳ ಗ್ರಂಥಾಲಯವಿದೆ, ಸಂಶೋಧಕರು ಶೋಧಿಸಿ, ಪರಾಮರ್ಶಿಸಿ, ಸಂಪಾದಿಸಿದ ಗ್ರಂಥಗಳ ಮುದ್ರಣಕ್ಕಾಗಿ ಮುದ್ರಣಾಲಯ ಮಗದೊಂದು ಕಡೆಇದೆ.

ಮಲಾಪಹಾರಿ ನದಿ ತಟದಲ್ಲಿರುವ ಪರ್ಣಕುಟೀರದಲ್ಲಿ ಸಾಧಕರ ತಪಸ್ಸು ನಡೆದಿರುತ್ತದೆ, ಮೇಲು ಮಠದಲ್ಲಿ ವಟುಗಳ ದರ್ಶನ ಶಾಸ್ತ್ರಾಭ್ಯಾಸ, ಕಲ್ಲುಮಠದಲ್ಲಿ ಸಂಸ್ಕೃತ ಅಭ್ಯಾಸ, ಹಾಲಕೆರೆಯ ತಪಸ್ವಿಗಳ ಪೂಜಾಮಂಟಪ, ಮುದ್ರಣಾಲಯದಲ್ಲಿ ಕಾಯಕನಿರತರಾದ ವಟುಗಳು, ಗ್ರಂಥಾಲಯದಲ್ಲಿ ಪುರಾತನ ಗ್ರಂಥಗಳ ಅಧ್ಯಯನ ನಡೆಸಿರುವ ಕಾವಿ ಲಾಂಛನಧಾರಿ ನಾಳಿನ ಪೀಠಾಧಿಪತಿಗಳು, ಹೂಗಿಡಗಳಿಗೆ ನೀರೆರೆವ ಕಾಷಾಂಬರಧಾರಿಗಳು–ಎಲ್ಲಿನೋಡಿದರಲ್ಲಿ ಕೇವಲ ವಟುಗಳು, ಕಿವಿಟೊಪ್ಪಿಗೆ, ಕಪನಿ ಧರಿಸಿ ಚೈತನ್ಯದಿಂದ, ತೇಜಸ್ಸಿನಿಂದ ತುಂಬಿದ ಮುಖ ಮಂಡಲದ ವಟುಗಳು.

ಹಾನಗಲ್ಲ ಕುಮಾರಶಿವಯೋಗಿಗಳು ಈ ಶಿವಯೋಗ ಮಂದಿರಸ್ಥಾಪಿಸಿದಾಗ ಕೇವಲ ಏಳು ಮಂದಿ ಸಾಧಕರಿದ್ದರು. ಅವರೇ ಮುಂದೆ ಸವದತ್ತಿ–ಬಿದರಿ ಶ್ರೀ ನಿ. ಪ್ರ. ಅಪ್ಪಯ್ಯಸ್ವಾಮಿಗಳು, ನವಿಲುಗುಂದದ ಗವಿಮಠಾಧ್ಯಕ್ಷರಾದ ಶ್ರೀ ನಿ. ಪ್ರ. ಬಸವಲಿಂಗಸ್ವಾಮಿಗಳು, ಘ. ಚ. ಕುಷ್ಟಗಿ ಪಟ್ಟದ್ದೇವರು, ಕುರುವತ್ತಿಯ ಶ್ರೀ ನಿ. ಪ್ರ. ಮಹಾದೇವ ಸ್ವಾಮಿಗಳು, ಬಾಗಲಕೋಟೆಯ ಶ್ರೀ ನಿ. ಪ್ರ. ಶಿವಬಸವ ಸ್ವಾಮಿಗಳು, ಮುಮದಾಪುರದ ಮರಿದೇವರು, ಕೊಪ್ಪದ ಶ್ರೀ ನಿ. ಪ್ರ, ಮಹಾಂತಸ್ವಾಮಿಗಳು ಎಂದು ನಾಮಾಂಕಿತರಾದರು.

ಆದರೆ ಅಂದಿನಿಂದ ಇಂದಿನವರೆಗೆ ಸಾವಿರಾರು ಸಾಧಕರು ಸಿದ್ಧಿ ಪಡೆದು ಶಿವಯೋಗ ಮಂದಿರದ ಸ್ನಾತಕರಾಗಿ ಹೊರಹೋಗಿದ್ದಾರೆ, ಪೀಠಾಧಿಪತಿಗಳಾಗಿದ್ದಾರೆ.

ಇಂದಿಗೆ ಎಂಟು ನೂರು ವರುಷಗಳ ಹಿಂದೆಯೇ ಕಲ್ಯಾ

ಣದ ಶಿವಶರಣ ಘಟ್ಟಿವಾಳಯ್ಯನವರು ಇಪ್ಪತ್ತನೆಯ ಶತಮಾನದಲ್ಲಿ ಓರ್ವ ಶಿವಯೋಗಿಯಿಂದ 'ಶಿವಯೋಗಮಂದಿರ' ಸ್ಥಾಪನೆಯಾಗುತ್ತದೆಯೆಂದು ತನ್ನ ಕಾಲಜ್ಞಾನ ವಚನದಲ್ಲಿ ಸಾರಿದ್ದ.

ಆ ವಚನ ಇಂತಿದೆ:

"ಗಿಡ ಮಾಗಡಿಯೆಂಬ ಪುರದ ಜಂಗಮದೇವ
ಮೃಡಕಣಾ ! ಭಿಕ್ಷವ ಬೇಡ್ಯಾನು !
ಪೊಡವಿಯೇ ಬಾಗಿ ನೀಡಲು
ಆತನು ದೃಢದಿಂದ ನೀಡಿಸಿಕೊಂಡಾನು !
ಮಲಾಪಹಾರಿಯ ತೀರದಿ ವಿರಕ್ತ ಜಂಗಮನೊಬ್ಬ
ನಲವಿಂದೆ ಹುಚ್ಚನೆನಿಸ್ಯಾನು !
ಲೋಲ ಜನಗಳು ಹೆಸರನೆ ಇಟ್ಟಾರು
ಸ್ಥಲದೊಳು ಹೂಳಿಸಿಕೊಂಡಾನು."

ಇದನ್ನೆಲ್ಲ ನೋಡಿದಾಗ ಶಿವಯೋಗ ಮಂದಿರದ ಸ್ಥಾಪನೆಯ ವಿಚಾರ ಇಂದಿನದಲ್ಲ ನಿನ್ನೆಯದಲ್ಲ ಎಂಟು ನೂರು ವರುಷಗಳ ಹಿಂದೆಯೇ ಕಲ್ಯಾಣದ ಶರಣರ ಸಂಕಲ್ಪವಾಗಿತ್ತೆಂದು ಅನ್ನಿಸುವುದಿಲ್ಲವೇ ?

ಶಿವಶರಣರ ಸಂಕಲ್ಪದಂತೆ ಹಾನಗಲ್ಲ ಶ್ರೀಗಳು ಶಿವಯೋಗ ಮಂದಿರ ಕಟ್ಟಿ ಸಾಧಕರನ್ನು, ಶಿವಯೋಗಿಗಳನ್ನು ತಮ್ಮ ತಪಃಶಕ್ತಿಯಿಂದ ಸಜ್ಜುಗೊಳಿಸಿದರೆಂದೇ ಕರ್ನಾಟಕದ ಮಠಗಳು, ಪೀಠಗಳು ಸಮರ್ಥ ಸ್ವಾಮಿಗಳಿಂದ, ಜಗದ್ಗುರುಗಳಿಂದ ಬೆಳಗಲು, ಬೆಳೆಯಲು, ವೀರಶೈವ ಸಮಾಜ ಉಳಿಯಲು, ವೀರಶೈವ ಆಚಾರ ವಿಚಾರಗಳು ಜೀವಂತವಾಗಿರಲು ಸಾಧ್ಯವಾಯಿತು.

ಶಿವಯೋಗ ಮಂದಿರವ ಭಕ್ತಿಶ್ರದ್ಧೆಯಿಂದ ಹೊಕ್ಕು ಬಂದವರು ಲಿಂಗಪದವಿಯ ಪಡೆದರು, ಹೆಚ್ಚೇನು !

ಹಾನಗಲ್ಲ ಕುಮಾರಶಿವಯೋಗಿಗಳ ಕಾರ್ಯ ಎಂಟು ನೂರು ವರುಷಗಳ ಹಿಂದೆಯೇ ಕಲ್ಯಾಣದ ಶರಣರಿಂದ ನಿಶ್ಚಿತಗೊಂಡಿತ್ತು. ಈ ಶತಮಾನದಲ್ಲಿ ಎಳಂದೂರು ಗುರು ಬಸವಲಿಂಗ ಮಹಾಸ್ವಾಮಿಗಳ ಕೃಪೆಗೆ ಪಾತ್ರರಾಗಿ, ಬಿದರಿ ಕುಮಾರಮಹಾಸ್ವಾಮಿಗಳ ಅಂತಃಕರಣ ಪಡೆದು, ವೈರಾಗ್ಯ ನಿಧಿ ಮಲ್ಲಣಾರ್ಯರ ಸದಿಚ್ಛೆ, ಮಹಾ ತಪಸ್ವಿ ಹಾವೇರಿ ಶಿವಬಸವ ಮಹಾಸ್ವಾಮಿಗಳ, ಸೊನ್ನಲಿಗೆಯ ವೀರೇಶ ಶರಣರ ಸಹಯೋಗದಿಂದ ಹಾನಗಲ್ಲ ಕುಮಾರಶಿವಯೋಗಿಗಳು ಇಳಕಲ್ಲ ಮಹಾ ಮಹಿಮ ವಿಜಯ ಮಹಾಂತಸ್ವಾಮಿಗಳು ಸೂಚಿಸಿದ ಈ ಪವಿತ್ರ ತಾಣದಲ್ಲಿ ಶಿವಯೋಗ ಮಂದಿರವ ನಿರ್ಮಿಸಿ ಎಂಟುನೂರು ವರುಷಗಳ ಪೂರ್ವದಲ್ಲಿ ಶರಣರಿಂದ ನಿಶ್ಚಿತಗೊಂಡ ಕಾರ್ಯ ಪೂರ್ಣಗೊಳಿಸಿದರು.

## ಶಿವಯೋಗ ಮಂದಿರ : ಅದರ ಪರಿಸರ

ಸುತ್ತಲೂ ಗುಡ್ಡದೋರೆ. ನಾನಾ ಗಿಡಬಳ್ಳಿ, ವೃಕ್ಷಗಳಿಂದ, ಗಿಡಮೂಲಿಕೆಗಳಿಂದ, ಲತಾಮಂಟಪಗಳಿಂದ ಆವೃತಗೊಂಡಿರುವ ವಿಶಾಲ ಪ್ರದೇಶ. ಮಧ್ಯದಲ್ಲಿ ಶಿವಯೋಗ ಮಂದಿರದ ಸಂಸ್ಥಾಪನಾಚಾರ್ಯ, ವೀರಶೈವ ಧರ್ಮದ ಪುನರುತ್ಥಾನ ಕಾರ್ಯಗೈದ ಮಹಾಮಹಿಮ ಹಾನಗಲ್ಲ ಕುಮಾರಶಿವಯೋಗಿಗಳ ಸಮಾಧಿ ಮಂದಿರ.

ಬಹು ಸುಂದರವಾಗಿದೆ, ಕಲಾತ್ಮಕವಾಗಿದೆ ಈ ಸಮಾಧಿ ಮಂದಿರ. ಕಲ್ಲಲ್ಲ ಇದು ಕಲೆಯ ಆಗರ. ಈ ಮಂದಿರ ಆಧುನಿಕ ರೀತಿಯಲ್ಲಿ ನಿರ್ಮಾಣವಾಗಿದ್ದರೂ ಅದಕ್ಕೊಂದು ಪುರಾತನತ್ವವಿದೆ. ಈ ಚೋದ್ಯವನ್ನು ಅಗುಗೊಳಿಸಿದ ಇಂದಿನ

ಹಾನಗಲ್ಲ ವಿರಕ್ತ ಮಠಾಧ್ಯಕ್ಷರು ಹಾಗು ಶಿವಯೋಗಮಂದಿರದ ಆಗುಹೋಗುಗಳ ಕಾರಣಕರ್ತರಾದ ಶ್ರೀ ನಿ. ಪ್ರ. ಸದಾಶಿವಸ್ವಾಮಿಗಳು. ಶ್ರೀಗಳದು ಬಹು ಕಲಾತ್ಮಕ ದೃಷ್ಟಿ. ತಮ್ಮ ಗುರುವಿನ ಈ ಸಮಾಧಿಯನ್ನು ಲಕ್ಷಾಂತರ ರೂಪಾಯಿ ಖರ್ಚಿನಿಂದ ಬಹು ಶ್ರದ್ಧೆ, ಭಕ್ತಿಯಿಂದ ಸೋಜಿಗವೆನ್ನುವಂತೆ ನಿರ್ಮಾಣ ಮಾಡಿಸಿದ್ದಾರೆ. ಈ ಸಮಾಧಿ ಮಂದಿರ ಶಿಲ್ಪ ಕಲೆಗೆ ಒಂದು ದೊಡ್ಡ ಕಾಣಿಕೆ.

ಕಲ್ಲಿನಲ್ಲಿ ನಮ್ಮ ನಾಡಿನ ಪ್ರತಿಭಾವಂತ ರೂವಾರಿಗಳು ಬರೆದ ಸುಂದರ ಕಾವ್ಯವಾಗಿದೆ ಇದು. ಇದರ ಗಂಭೀರ ಮಂತ್ರ ಮುಗ್ಧಗೊಳ್ಳುವಂಥ ಸೌಂದರ್ಯಕ್ಕೆ ಭಕ್ತರು, ಕಲಾಪ್ರೇಮಿಗಳು ಮೈ ಮರೆಯದಿರಲಾರರು. ಸಮಾಧಿಯ ದರ್ಶನವಂತೂ ಅದೊಂದು ದಿವ್ಯಾನುಭವ ನೀಡುತ್ತದೆ ದರ್ಶಕನಿಗೆ.

ಇಲ್ಲಿಯ ಒಂದೊಂದು ಕಂಬಗಳಲ್ಲಿ ಸುಳಿದೆಗೆದು ನಿಂತಿರುವ ಸುಳುಹುಗಳು, ಬಳ್ಳಿಗಳು ಕಣ್ಣಿಗೆ ಹಬ್ಬವನ್ನುಂಟು ಮಾಡುತ್ತವೆ. ಉತ್ತರಾಭಿಮುಖವಾಗಿರುವ ಈ ಸಮಾಧಿ ಮಂದಿರದ ಎದುರಿಗೆ ಕಲ್ಲುಮಠವಿದೆ. ಇಲ್ಲಿಯೇ ವಟುಗಳು, ಸಾಧಕರು, ದೇವರು ವಾಸಿಸುತ್ತಾರೆ. ಅದರ ಮುಂದೆ ಶ್ರೀ ಸದಾಶಿವ ಮುದ್ರಣಾಲಯವಿದೆ, ಅದರ ಎದುರಿಗೇನೇ ಶ್ರೀ ರೇವಣಸಿದ್ಧೇಶ್ವರ ವಾಚನಾಲಯವಿದೆ, ಶ್ರೀ ವಿಜಯ ಮಹಾಂತೇಶ್ವರ ಓಲೆಗರಿ ಗ್ರಂಥಾಲಯವಿದೆ, ಅದರ ಪಕ್ಕದಲ್ಲಿಯೇ ಬಿಲ್ವವನ, ಆ ಬನದ ಪಕ್ಕದಲ್ಲಿಯೇ ಹಾಳಕೇರಿ ಶ್ರೀಗಳ ಪೂಜಾಮಂಟಪ, ನದಿಯ ತಟದಲ್ಲಿ ಮೇಲುಮಠ, ಈಗ ಅದರ ಪಕ್ಕದಲ್ಲಿ ಆಧುನಿಕ ವಸ್ತು ಕಲೆಯ ಬೃಹದ್ ಕಟ್ಟಡ ಬರುತ್ತಲಿದೆ. ಅದರ ಪಕ್ಕದಲ್ಲಿ ಮಲಾಪಹಾರಿಯ

ತೆರೆಗಳು ಬಂದು ಅಪ್ಪಳಿಸುವಷ್ಟು ಸಮೀಪದಲ್ಲಿ ಲತಾ ಮಂಟಪ ! ಸೌಂದರ್ಯ ಸೂರೆ ಹೊಯ್ದಿದೆ ಇಲ್ಲಿ. ನಿಸರ್ಗ ತನ್ನೆಲ್ಲ ಚೆಲುವನ್ನು ಓಕಳಿಯಾಡಿದ ಹಾಗಿದೆ ಇಲ್ಲಿ. ಇಲ್ಲಿರುವ ನಿರಾಡಂಬರವಾದ ಮಣ್ಣಿನ ಕಟ್ಟೆಗಳ ಮೇಲೆ, ಹೂ ಎಲೆಗಳ ಆಸನ ಹಾಸಿರುವ ಕಟ್ಟೆಗಳ ಮೇಲೆ ಕುಳಿತು ಹಾನಗಲ್ಲ ಶ್ರೀಗಳು ತಮ್ಮ ಕಾಲದ ವಟುಗಳಿಗೆ, ಸಾಧಕರಿಗೆ ಸಂಜೆ ಮುಂಜಾವು ಪಾಠ ಪ್ರವಚನ ಮಾಡುತ್ತಿದ್ದರಂತೆ. ಆ ಮಹಾ ಮಹಿಮನ ಪ್ರಕೃತಿಪ್ರಿಯತೆ ಎಂಥ ಘನ ವಾದುದು. ನೆನಸಿಕೊಂಡರೆ ಸಾಕು ರೋಮಾಂಚನವಾಗು ತ್ತದೆ. ಈ ಪರಿಸರ ವಿಶಾಲವಾದ ಲತಾ ಮಂಟಪದಿಂದ, ಜೋಗುಳಗೈವ ತಾಯಿ ಮಲಾಪಹಾರಿಯ ಗಾನ ಮಾಧುರ್ಯದಿಂದ ಭಾವುಕರನ್ನು ಶಬ್ದ ಮುಗ್ಧರನ್ನಾಗಿಸು ತ್ತದೆ.

ಈ ದಾರಿಯಲ್ಲಿಯೇ ಕೊಟ್ಟೂರು ಸ್ವಾಮಿಗಳು ಅನು ಷ್ಠಾನ ಮಾಡಿದುದರ ಪ್ರತೀಕವಾಗಿರುವ ಒಂದು ಮಂಟಪ ವಿದೆ. ಅದರ ಪಕ್ಕದಲ್ಲಿಯೇ ಹಾನಗಲ್ಲ ವಿರಕ್ತ ಮಠಾಧ್ಯ ಕ್ಷರೂ, ಹಾನಗಲ್ಲ ಕುಮಾರಶಿವಯೋಗಿಗಳ ಪರಮ ಶಿಷ್ಯರೂ ಆದ ಶ್ರೀ ನಿ. ಪ್ರ. ಸದಾಶಿವಸ್ವಾಮಿಗಳು ವಾಸಿ ಸುವ ಮಠವಿದೆ. ಆಚೆಪಕ್ಕದಲ್ಲಿ ಮೇಲುಮಠಕ್ಕೆ ಹೋಗುವ ದಾರಿಯಲ್ಲಿ ಹಾನಗಲ್ಲ ಶ್ರೀಗಳ ಶತಮಾನೋತ್ಸವ ಸ್ಮಾರಕ ವಾಗಿ ಹುಬ್ಬಳ್ಳಿಯ ಮೂರುಸಾವಿರ ಮಠದ ಜಗದ್ಗುರು ಗಳೂ, ಶಿವಯೋಗ ಮಂದಿರದ ಸಾಧಕರೂ, ಕುಮಾರ ಶಿವ ಯೋಗಿಗಳ ಪರಮ ಶಿಷ್ಯರೂ ಆಗಿರುವ ಶ್ರೀ ಮುನ್ನಿರಂಜನ ಜಗದ್ಗುರು ಗಂಗಾಧರ ರಾಜಯೋಗೀಂದ್ರ ಮಹಾಸ್ವಾಮಿ ಗಳವರು ಕಟ್ಟಿಸಿರುವ ಭವ್ಯವಾದ 'ಧ್ಯಾನಧಾಮ' ಕಂಗೊಳಿ

ಸುತ್ತಲಿದೆ. ಹಾನಗಲ್ಲ ಕುಮಾರಸ್ವಾಮಿಗಳೇ ಜಗದ್ಗುರುಗಳ ಜೀವನದುಸಿರು.

ಶಿವಯೋಗ ಮಂದಿರದ ಪರಿಸರ ಐತಿಹಾಸಿಕವಾಗಿ, ಪೌರಾಣಿಕವಾಗಿ ಬಹಳ ಮಹತ್ವ ಪಡೆದಿದೆ. ಇಲ್ಲಿ ಮಲಾಪಹಾರಿ ಉತ್ತರಾಭಿಮುಖಿಯಾಗಿದ್ದಾಳೆ. ಏಳೆಂಟು ಮೈಲು ದೂರದ ಅಂತರದಲ್ಲಿ ವಾತಾಪಿ ನಗರವಿದೆ, ನಾಲ್ಕುಮೈಲಿನ ಅಂತರದಲ್ಲಿ ಬನಶಂಕರಿ ದೇವಸ್ಥಾನವಿದೆ, ಮೂರುಮೈಲಿನ ಅಂತರದಲ್ಲಿ ಬಹು ಪ್ರಾಚೀನವಾದ ಮಹಾಕೂಟೇಶ್ವರ ಕ್ಷೇತ್ರವಿದೆ. ಮೂರು ಕಡೆ ಬೆಟ್ಟಗಳಿಂದ ಸುತ್ತುವರಿಯಲ್ಪಟ್ಟ ಈ ಕ್ಷೇತ್ರ ಬಹು ರಮಣೀಯವಾಗಿದೆ. ಪೂರ್ವಾಭಿಮುಖವಾಗಿರುವ ಮುಖ್ಯ ದೇವಸ್ಥಾನದಲ್ಲಿ ಮಹಾಕೂಟೇಶ್ವರ ಹಾಗೂ ಆದರ ಎದುರಿಗೆ ನಂದಿ ರಾರಾಜಿಸುತ್ತಲಿದೆ. ಗರ್ಭಗುಡಿಯ ಕಂಬಗಳಲ್ಲಿ ನಾಲ್ಕು ಶಾಸನಗಳಿವೆ. ಈ ಕ್ಷೇತ್ರ ಹಲವು ದೇವಸ್ಥಾನಗಳ ಹಾಗೂ ತೀರ್ಥಗಳ ಒಂದು ಸಮೂಹವೆಂದೇ ಹೇಳಬೇಕು. ಮುಖ್ಯ ದೇವಸ್ಥಾನದ ಸುತ್ತಲೂ ಪುಟ್ಟಪುಟ್ಟ ಆದರೂ ಶಿಲ್ಪಕಲೆಯ ದೃಷ್ಟಿಯಿಂದ ಮಹತ್ವಪಡೆದ ಮಂದಿರಗಳಿವೆ. ಅವುಗಳಲ್ಲಿ ವೀರಭದ್ರ ದೇವರಗುಡಿ. ಲಾಕುಲೇಶ್ವರಗುಡಿ, ಸಂಗಮೇಶ್ವರಗುಡಿ, ಮಲ್ಲಿಕಾರ್ಜುನ ಗುಡಿ, ಕಪಿಲೇಶ್ವರಗುಡಿ ಪ್ರಮುಖವಾದವುಗಳು. ಮಲ್ಲಿಕಾರ್ಜುನಗುಡಿಯ ಎದುರಿಗೆ ಚೆಲುವಾದ ನಂದಿ ಇದೆ.

ಇಲ್ಲಿರುವ ಸುಂದರ ಪುಷ್ಕರಣಿಯ ಒಳಗೂ ಲಿಂಗಗಳಿವೆ, ಜೋಡು ಪುಷ್ಕರಣಿಗಳಿವೆ. ಒಂದು ಪುಷ್ಕರಣಿಯಲ್ಲಿ ಮುಳುಗಿ ಇನ್ನೊಂದು ಪುಷ್ಕರಣಿಗೆ ಜಲಮಾರ್ಗದಲ್ಲಿಯೇ ಹೋದರೆ ಅಲ್ಲಿ ಜಲದಲ್ಲಿಯೇ ಒಂದು ಲಿಂಗದರ್ಶನವಾಗುತ್ತದೆ. ಅಲ್ಲಿಗೆ

ಹೋಗಿ ಲಿಂಗಪೂಜೆಗೈದು ಬಂದಾಗ, ಮನಸ್ಸಿಗೆ ಅಪೂರ್ವವಾದ, ಅಪ್ರಮಾಣವಾದ ಆನಂದವಾಗುತ್ತದೆ. ಮೈಮನವೆಲ್ಲ ಪುಳುಕಿತವಾಗುತ್ತದೆ, ಅದೊಂದು ಪರಮಾನಂದಾನುಭವವೆಂದೇ ಹೇಳಬೇಕು.

ಶಿವಯೋಗ ಮಂದಿರದ ಸ್ಥಾಪನೆಯ ಸಂಕಲ್ಪ ಮಾಡಿದವರು ಶರಣರು. ಅದನ್ನು ಆಗುಗೊಳಿಸಿದಾತ ಈ ಶತಮಾನದ ಶಿವಯೋಗಿ, ಅಂದಮೇಲೆ ಸ್ಥಳ ಹಾಗೂ ಪರಿಸರ ಇಷ್ಟು ಮಹತ್ವವಾಗಿರಬೇಕಾದುದರಲ್ಲಿ ಅಚ್ಚರಿಯೇನಿದೆ !

ಶಿವಯೋಗ ಮಂದಿರದ 'ಬಯಲಿ'ನಲ್ಲಿ ಆಡುವ ಮೋಡಗಳು, ಹಾಡುವ ಹಕ್ಕಿ ಪಕ್ಕಿಗಳು, ಗಿಳಿಗಳು, ಮಧುರ ಸ್ವರಗೈವ ಕೋಗಿಲೆಗಳು, ಸಾಸಿರಕಣ್ಣ ಗರಿಗೆದರಿ ಕುಣಿದು ಮನಮಯೂರ ಕುಣಿಯುವಂತೆ, ತಣಿಯುವಂತೆ ಮಾಡುವ ನವಿಲುಗಳು, ಬೆಳಕಿನ ಮರಿಗಳಾಗಿ ಎಲ್ಲೆಲ್ಲೂ ಅಡ್ಡಾಡುವ ಕಾಷಾಯಂಬರಧಾರಿ ವಟುಗಳು, ಸಾಧಕರು, ಶ್ರೀಗಳು-ಇದು ಲೋಕೋತ್ತರ ಬದುಕ ಸಾಧಿಸಲಿಕ್ಕೆ ತಕ್ಕುದು—ಎಂದು ಸಾರುತ್ತಲಿವೆ.

## ಶಿವಯೋಗ ಮಂದಿರದಲ್ಲಿ ನಿತ್ಯಕರ್ಮಗಳು

ಈಗ ಶಿವಯೋಗ ಮಂದಿರದಲ್ಲಿ ನಾಡಿನ ನಾನಾ ಭಾಗದಿಂದ ಬಂದ ನೂರಾರು ಜನ ಸಾಧಕರು ಶಿವಯೋಗ ಸಾಧನೆಯಲ್ಲಿ ನಿರತರಾಗಿದ್ದಾರೆ.

ಬ್ರಾಹ್ಮೀ ಮುಹೂರ್ತದಲ್ಲಿ ಏಳುವುದು, ಸಾಮೂಹಿಕ ಪ್ರಾರ್ಥನೆ, ಆನಂತರ ಪ್ರಾತಃರ್ವಿಧಿಗಳನ್ನು ತೀರಿಸಿಕೊಳ್ಳುವುದು, ಯೋಗಾಸನದಲ್ಲಿ ನಿರತರಾಗುವುದು, ಕನ್ನಡ

ಸಂಸ್ಕೃತ, ಇಂಗ್ಲಿಷ್ ಪಂಡಿತರಲ್ಲಿ ಅಧ್ಯಯನ, ಬೆಳಗಿನ ಪೂಜೆಗಾಗಿ ಪತ್ರಿಪುಷ್ಪ ಎತ್ತುವುದು. ನದಿಯಲ್ಲಿ ಮಿಂದು ಲಿಂಗಪೂಜೆ, ಅನುಷ್ಠಾನದಲ್ಲಿ ನಿರತರಾಗುವುದು, ಪ್ರಸಾದ ಸ್ವೀಕರಿಸುವುದು, ಮಧ್ಯಾಹ್ನದಲ್ಲಿ ಕೊಂಚ ವಿಶ್ರಾಂತಿ, ಮತ್ತೆ ಪಾಠಪ್ರವಚನ. ಪುರಾಣಶ್ರವಣ, ಯೋಗಮಂಟಪ ಗಳ ಸಾರಣೆ–ಕಾರಣೆ, ತೋಟ ಪಟ್ಟಿಗಳಿಗೆ ನೀರುಣಿಸುವುದು, ಸಂಜೆಯ ಪೂಜೆಗೆ ಪತ್ರಿ ಪುಷ್ಪ ಎತ್ತುವುದು, ಶ್ರೀಗಳ ಗದ್ದು ಗೆಯ ಮುಂದೆ ಸಾಯಂಕಾಲದ ಸಾಮೂಹಿಕ ಪ್ರಾರ್ಥನೆ, ಯೋಗಸಾಧನೆ, ಸ್ನಾನ, ಲಿಂಗಪೂಜೆ, ಪ್ರಸಾದ ಸ್ವೀಕರಿಸು ವುದು, ಅಧ್ಯಯನ, ವೈಯುಕ್ತಿಕ ಪ್ರಾರ್ಥನೆ, ರಾತ್ರಿ ಹತ್ತೂವರೆಗೆ ನಿದ್ರೆ ಹೋಗುವುದು. ಋತುಮಾನ ಹಾಗೂ ಶ್ರಾವಣ ಮಾಸಗಳಲ್ಲಿ ಈ ಕಾರ್ಯಕ್ರಮದಲ್ಲಿ ಹೆಚ್ಚು ಕಡಿಮೆಯಾಗುವುದುಂಟು.

ಹಾನಗಲ್ಲ ಕುಮಾರಶಿವಯೋಗಿಗಳು ಹಾಕಿಕೊಟ್ಟ ಈ ಕಾರ್ಯಕ್ರಮ ಇಂದಿಗೂ ಚಾಚೂ ತಪ್ಪದೆ ಇಲ್ಲಿ ನಡೆದು ಕೊಂಡು ಬರುತ್ತಲಿದೆ.

## ಪರಳಿಯ ಪ್ರಕರಣ

ಹಾನಗಲ್ಲ ಶ್ರೀಗಳು ಸಮತಾವಾದಿಗಳಾಗಿದ್ದರು. ಪರ ಮತ ಸಹಿಷ್ಣುತೆ ಅವರಲ್ಲಿ ಅಪಾರವಾಗಿತ್ತು. ಆದರೆ ಸ್ವಧ ರ್ಮಕ್ಕೆ ಕುಂದು ಬರಲಿದೆಯೆಂದಾಗ ರುದ್ರರಾಗುತ್ತಿದ್ದರು. ವೀರಶೈವ ಧರ್ಮದವರಿಗೆ 'ಶೂದ್ರತ್ವ' ಕಟ್ಟಲು ಅರ್ಧ ಶತಮಾನದ ಹಿಂದೆ ಕೆಲವರು ಪ್ರಯತ್ನಿಸಿದಾಗ ಶ್ರೀಗಳ ಸ್ವಧರ್ಮನಿಷ್ಠೆ ಸಿಡಿದೆದ್ದಿತು.

ಈ ಘಟನೆ ನಡೆದುದು–ಪರಳಿಯ ವೈಜನಾಥಲಿಂಗವನ್ನು ಪೂಜಿಸುವ ಅಧಿಕಾರ ವೀರಶೈವರಿಗಿಲ್ಲ–ಎಂದು ಕೆಲ ಸನಾತನಿಗಳು ವಾದ ಹೂಡಿದಾಗ.

ಪರಳಿ–ಅಂದಿನ ನಿಜಾಮರ ಸಂಸ್ಥಾನವಾಗಿದ್ದ ಹೈದರಾಬಾದ ಸಂಸ್ಥಾನದಲ್ಲಿ ಒಂದು ಗ್ರಾಮ. ಇಂದು ಇದು ಮರಾಠವಾಡಾದ ಪರಭಣಿ ಜಿಲ್ಲೆಯಲ್ಲಿದೆ. ಗೋದಾವರಿ ನದಿಯ ಬಲದಂಡೆಯ ಮೇಲಿರುವ ಈ ಗ್ರಾಮ, ದ್ವಾದಶ ಜ್ಯೋತಿರ್ಲಿಂಗಗಳಲ್ಲೊಂದಾದ 'ವೈದ್ಯನಾಥೇಶ್ವರ' ಲಿಂಗದಿಂದಾಗಿ ಬಹು ಪ್ರಸಿದ್ಧಿ ಹೊಂದಿದೆ. ಈ ಶಿವಲಿಂಗವನ್ನು ಮಹಾ ಶಿವಶರಣೆಯಾದ ವೈಜವ್ವೆ ಸ್ಥಾಪಿಸಿದಳೆಂದು ಹೇಳಲಾಗುತ್ತದೆ. ಗೋದಾವರಿ ನದಿ ತೀರದ ಭಾಗವೆಲ್ಲ ಶಿವಶರಣರ ಪಾದ ಸ್ಪರ್ಶದಿಂದ ಪುನೀತವಾಗಿದೆ. ಈ ಭಾಗದ ಹಲವಾರು ಊರುಗಳಿಗೆ ಕನ್ನಡ ಹೆಸರುಗಳಿವೆ. ನೃಪತುಂಗನ ಕಾಲದಲ್ಲಿ ಇದು ಕನ್ನಡ ಪ್ರಾಂತಕ್ಕೆ ಸೇರಿದುದಾಗಿರಬೇಕು ಎನ್ನುವುದಕ್ಕೆ ಬೇಕಾದಷ್ಟು ಸಾಕ್ಷಿಗಳಿವೆ.

ಈ ವೈಜನಾಥೇಶ್ವರ ಮಂದಿರದ ಎಲ್ಲ ವ್ಯವಸ್ಥೆ ಅನಾದಿ ಕಾಲದಿಂದ ವೀರಶೈವರ ಕೈಯಲ್ಲಿತ್ತೆಂದು ತಿಳಿಯುತ್ತದೆ. ಪೂಜಾರಿಗಳು ಕೂಡ ವೀರಶೈವರೇ ಆಗಿದ್ದರು. ಆದರೆ ಇಪ್ಪತ್ತನೆಯ ಶತಮಾನದಲ್ಲಿ ಜನಿಸಿದ ಶ್ರೀ ಕುಮಾರ ಶಿವಯೋಗಿಯ ಶಿವಯೋಗದ ಮಹತಿಯ ಹೆಚ್ಚಳಿಕೆಗಾಗಿ ಈ ಘಟನೆ ನಡೆಯಿತೆಂಬಂತೆ ಕೆಲ ಸನಾತನಿಗಳು 'ವೀರಶೈವರಿಗೆ ವೈಜನಾಥ ಜ್ಯೋತಿರ್ಲಿಂಗ ಪೂಜಿಸುವ ಅಧಿಕಾರವಿಲ್ಲ' ಎಂದು ಶ್ರಾವಣಮಾಸದ ರುದ್ರಾಭಿಷೇಕಕ್ಕೆ ಅಡ್ಡಿಯುಂಟು ಮಾಡಿದರು. ಈ ವಿವಾದ ಕೋರ್ಟ್ ಕಟ್ಟೆ ಏರಿತು. ತಾಲೂಕ ಹಾಗೂ ಜಿಲ್ಲಾ ಮಟ್ಟದ ಕೋರ್ಟ್‌ಗಳಲ್ಲಿ ಯಾವ ನಿರ್ಣಯ

ವಾಗದೆ ಅದು ಹೈದರಾಬಾದದಲ್ಲಿದ್ದ ಉಚ್ಚ ಧಾರ್ಮಿಕ ನ್ಯಾಯಾಲಯಕ್ಕೆ ಹೋಯಿತು. ಅಲ್ಲಿ ಈ ವ್ಯಾಜ್ಯ ನಡೆಸಲು ಅಪಾರ ಧನ ಹಾಗೂ ಸಂಸ್ಕೃತ ಪಂಡಿತರ ಅವಶ್ಯಕತೆ ಇತ್ತು. ಈ ಮಹತ್ಕಾರ್ಯಕ್ಕೆ ಅಸಾಧಾರಣ ವ್ಯಕ್ತಿತ್ವ ಪಡೆದವರೇ ಆಗಬೇಕಿತ್ತು. ಸರಿ, ಹಾನಗಲ್ಲ ಕುಮಾರ ಶಿವಯೋಗಿಗಳು ಈ ಕಾರ್ಯಕ್ಕೆ ಸನ್ನದ್ಧರಾದರು.

ಪರವಾದಿಗಳು ಪುಣೆ ಮೊದಲಾದ ಕಡೆಯಿಂದ ತಮ್ಮ ಪರವಾಗಿ ವಾದಿಸಲು ಪಂಡಿತರನ್ನು, ನ್ಯಾಯವಾದಿಗಳನ್ನು ಕರೆಯಿಸಿದರು. ಶ್ರೀಗಳು ನಾಡಿನ ವೀರಶೈವ ಪಂಡಿತರಿಗೆ ಕರೆಕೊಟ್ಟರು. ಪ್ರಕಾಂಡ ಪಂಡಿತರೂ, ಚೌಡಯ್ಯದಾನ ಪುರದ ಪೀಠಾಧಿಪತಿಗಳೂ, 'ವೇದತೀರ್ಥ'ರೂ ಆಗಿದ್ದ ಪೂಜ್ಯ ಶ್ರೀ ವಿರೂಪಾಕ್ಷ ಒಡೆಯರ ಸ್ವಾಮಿಗಳು ಹಾಗೂ ಕೊಪ್ಪಳದ ಗವಿ ಮಠಾಧ್ಯಕ್ಷರೂ, ಸಂಸ್ಕೃತದಲ್ಲಿ ಘನ ವಿದ್ವಾಂಸರೂ ಆಗಿದ್ದ ಶ್ರೀ ನಿ. ಪ್ರ. ಮರಿಶಾಂತವೀರ ಮಹಾ ಸ್ವಾಮಿಗಳು ಹಾನಗಲ್ಲ ಶ್ರೀಗಳ ಕರೆಗೆ ಓಗೊಟ್ಟು ಬಂದರು. ಶಿವಯೋಗ ಮಂದಿರದಿಂದ ಕಾಶಿಗೆ ಸಂಸ್ಕೃತ ವಿದ್ಯಾಭ್ಯಾಸಕ್ಕೆ ಹೋಗಿದ್ದ ವಿದ್ವಾಂಸರೂ ಈ ಹೊತ್ತಿಗೆ ಶ್ರೀಗಳ ಸನ್ನಿಧಿಗೆ ಧಾವಿಸಿದರು.

ಹಣಕ್ಕಾಗಿ ಶ್ರೀಗಳು ಜೋಳಿಗೆ ಹಾಕಿದರು. ಹತ್ತಾರು ಸಾವಿರ ಕೂಡಿಸಿಕೊಂಡು ಪಂಡಿತರನ್ನು ನ್ಯಾಯವಾದಿಗಳನ್ನು ಕರೆದುಕೊಂಡು ಹೈದರಾಬಾದ ತಲುಪಿದರು. ಅಲ್ಲಿ ಬಂದಿದ್ದ ಸ್ವಾಮಿಗಳ ಆಚಾರ, ಅನುಷ್ಠಾನಕ್ಕೆ ಎಲ್ಲ ವ್ಯವಸ್ಥೆಯನ್ನು ತಾವೇ ಮಾಡಿದರು.

ಈ ವ್ಯಾಜ್ಯ ಬಹಳ ದಿನಗಳವರೆಗೆ ನಡೆಯಿತು. ಬಹಳಷ್ಟು ಹಣ ಖರ್ಚಾಯಿತು. ಶ್ರೀಗಳ ಭಕ್ತಕೋಟಿ ಹಣ

ವನ್ನು ನೀಡಿದರು. ವೀರಶೈವರ ಪರವಾಗಿ ಸುಪ್ರಸಿದ್ಧ ನ್ಯಾಯವಾದಿಯಾಗಿದ್ದ ಶ್ರೀಮಾನ್ ರಾಯ್ ವಿಶ್ವೇಶ್ವರ ನಾಥರು ಬಹು ದಿನಗಳವರೆಗೆ ವಾದಿಸಿದರು. ಅವರ ವಾದಕ್ಕೆ ಪೂರಕವಾಗುವಂತಹ ಸಾಹಿತ್ಯ ಸಾಮಗ್ರಿಯನ್ನು ವೀರ ಶೈವ ಪಂಡಿತರು ಒದಗಿಸುತ್ತಿದ್ದರು. ಕೊನೆಗೊಮ್ಮೆ ಮೂರುಜನ ವಿಶೇಷ ನ್ಯಾಯಾಧೀಶರಿಂದ ನಾಲ್ಕುನೂರು ಪುಟದ ನಿರ್ಣಯ ವೀರಶೈವರ ಪರವಾಗಿ ಹೊರಬಂದಿತು– "ವೀರಶೈವರದು ಸ್ವತಂತ್ರ ಧರ್ಮ ಅವರಿಗೆ ರುದ್ರಾಭಿಷೇಕ ಮಾಡುವ ಅಧಿಕಾರವಿದೆ. ಆದ್ದರಿಂದ ವೀರಶೈವರು ಪರ ಳಿಯ ವೈಜನಾಥಲಿಂಗಕ್ಕೆ ಗೈವ ರುದ್ರಾಭಿಷೇಕಕ್ಕೆ ಯಾರೂ ಅಡ್ಡಿ ಮಾಡಲಾಗದು. ಆ ಕಾರಣ ಪರಳಿಯ ವಾದಿಗಳ ಈ ದಾವೆಯನ್ನು ಈ ಕೋರ್ಟು ತಳ್ಳಿ ಹಾಕುತ್ತದೆ" ಎಂದು ನಿಜಾಮರ ಸಹಿಯೊಂದಿಗೆ ಸರಕಾರಿ ಗೆಜಿಟನಲ್ಲಿ ಪ್ರಕಟ ವಾಯಿತು.

ಹಾನಗಲ್ಲ ಶ್ರೀಗಳಿಗೆ, ವೀರಶೈವರಿಗೆ ಅಪರಿಮಿತ ಆನಂದ ತಂದಿತು ಈ ನಿರ್ಣಯ. ಹಾನಗಲ್ಲ ಶ್ರೀಗಳಂತಹ ಧೀಮಂತರು, ತಪೋನಿಷ್ಠರು, ಸ್ವಧರ್ಮನಿಷ್ಠರು ಇಲ್ಲದೆ ಹೋಗಿದ್ದರೆ ಅಂದು ಕೆಲವರಿಂದ ಈ ಧರ್ಮಕ್ಕೆ ತಟ್ಟಲಿದ್ದ ಕಲಂಕ ತಪ್ಪುವುದು ಕಷ್ಟವಾಗಿತ್ತು.

ಇಂದು ಈ ಘಟನೆಗೆ ಯಾವ ಮಹತ್ವವೂ ಇಲ್ಲ ನಿಜ. ಆದರೆ ಅರ್ಧಶತಮಾನದ ಹಿಂದೆ ನಡೆದ ಈ ಘಟನೆ ನಾಡಿನ ತುಂಬೆಲ್ಲ ಕೋಲಾಹಲ ವೆಬ್ಬಿಸಿತ್ತೆಂಬುದನ್ನು ಮರೆ ಯುವಂತಿಲ್ಲ.

# ೫೦. ಪಂಚಾಕ್ಷರಗವಾಯಿಗಳು

ಹಾನಗಲ್ಲ ಕುಮಾರಶಿವಯೋಗಿಗಳು ಜೀವನದ ನಾನಾ ಮುಖಗಳೂ ಏಳ್ಗೆ ಹೊಂದಬೇಕೆಂದು, ಅವು ಶಿವ ಮುಖವಾಗಿರಬೇಕೆಂದು ಭಾವಿಸಿದವರು. ಕೇವಲ ಶಿವ ಯೋಗವೊಂದೇ ಭಗವಂತನ ಸಾಕ್ಷಾತ್ಕಾರಕ್ಕೆ ಯೋಗ್ಯ ವೆಂದು ಅವರು ತಿಳಿದಿರಲಿಲ್ಲ. ಸಂಗೀತವೂ ಒಂದು ಶಿವ ಯೋಗವೇ ಎಂದು ಭಾವಿಸಿದ್ದರು. ಅವರ ಈ ಭಾವನೆ ಯನ್ನು ಸತ್ಯಗೊಳಿಸಲು ಒಬ್ಬ ಅಂಧ ಬಾಲಕ ಶ್ರೀಗಳ ಶಿಷ್ಯ ನಾಗಿ ಬಂದ. ಮುಂದೆ ಗುರುವಿನ ಅಪಾರ ಕರುಣೆಯಿಂದ ಆ ಬಾಲಕ ರಾಷ್ಟ್ರವಿಖ್ಯಾತ ಉಭಯಗಾಯನವಿಶಾರದನಾಗು ತ್ತಾನೆ. ಆತ ಗಾನಯೋಗಿ ಪಂಚಾಕ್ಷರಗವಾಯಿ. ಪಂಚಾಕ್ಷರ ಗವಾಯಿಗಳಿಗೆ ಹಾನಗಲ್ಲ ಶ್ರೀಗಳು ಸಂಗೀತ ಸರಸ್ವತಿಯ ಸಾಕ್ಷಾತ್ಕಾರವಾಗುವಂತೆ ಆಶೀರ್ವದಿಸಿದರು. ಹಾಗೆ ಸಾಕ್ಷಾ ತ್ಕಾರ ಪಡೆದ ಗವಾಯಿಗಳು ಸಂಗೀತವನ್ನು ಶಿವಯೋಗದ ಗದ್ದಿಗೆಯ ಮೇಲೆ ಕೂಡಿಸಿ ಆರಾಧಿಸಿದರು. ಶಿವಯೋಗ ಮಂದಿರದ ಸುತ್ತಲಿನ ಬೆಟ್ಟದೋರೆ ಗವಾಯಿಗಳ ಸಂಗೀತ ದಿಂದ ಮರುಧ್ವನಿಗೊಂಡರೆ ಅಲ್ಲಿಯ ಮಲಾಪಹಾರಿ ನದಿ ಗವಾಯಿಗಳ ಸಂಗೀತದ ಅಲೆಹೊತ್ತು ಹರಿಯುತ್ತಿತ್ತು. ಅಲ್ಲಿಯ ಪಕ್ಷಿ ಸಂಕುಲ ತಮ್ಮ ಕಂಠದಲ್ಲಿ ಪಂಚಾಕ್ಷರ ಗವಾ ಯಿಗಳ ಗಾನ ಮಾಧುರ್ಯ ತುಂಬಿಕೊಂಡು ಪ್ರಕೃತಿಗೆ ಜೋಗುಳ ಪಾಡುತ್ತಿದ್ದವು.

ಸಂಗೀತದಲ್ಲಿ ಅದ್ವಿತೀಯರೆನಿಸಿದ್ದಂತೆ ಗವಾಯಿಗಳು ಅಖಂಡ ಬ್ರಹ್ಮಚರ್ಯವ್ರತ ನಡೆಸಿ, ಲಿಂಗಾರ್ಚನೆ,

ಲಿಂಗಾನುಸಂಧಾನ, ಗುರುಲಿಂಗ ಜಂಗಮ ಭಕ್ತಿಯಲ್ಲಿಯೂ ನಿಸ್ಸೀಮರೆನಿಸಿದ್ದರು.

ಗುರುಗಳ ಅಪ್ಪಣೆಯಂತೆ ದೇಶಸಂಚಾರ ಕೈಕೊಂಡು ಅಲ್ಲಲ್ಲಿ ಸಂಗೀತ ಕಚೇರಿ ನಡೆಸಿ ಸಂಗೀತದ ಬಗ್ಗೆ ಜನರಲ್ಲಿ ಉತ್ಸಕತೆ, ಸದಭಿರುಚಿ ಹುಟ್ಟಸಿದರು. ಆ ಕಾಲದಲ್ಲಿ ಅವರನ್ನು ಅರಮನೆಗಳು, ಗುರುಮನೆಗಳು ಕರೆಯಿಸಿಕೊಂಡು ಸಂಗೀತ ಕಚೇರಿ ನಡೆಸಿ, ಸ್ವರ್ಗೀಯ ಆನಂದವನ್ನೀಯುವ ಆ ಸಂಗೀತ ಕೇಳಿ ಬಿರುದುಗಳನ್ನು, ಖಿಲ್ಲತ್ತುಗಳನ್ನು ನೀಡಿ ಸನ್ಮಾನಿಸಿದವು.

ಪಂಚಾಕ್ಷರಗವಾಯಿಗಳ ಪಟ್ಟಶಿಷ್ಯರಾದ ಉಭಯ ಗಾಯನ ವಿಶಾರದರೂ, ತ್ರಿಭಾಷಾ ಕವಿಗಳೂ ಆದ ಪಂ. ಪುಟ್ಟರಾಜಗವಾಯಿಗಳು ಹುಟ್ಟು ಕುರುಡರು. ತಮ್ಮ ಗುರುವಿನ ಕಾರ್ಯವನ್ನು ಈಗಲೂ ಮುಂದುವರಿಸಿಕೊಂಡು ಬರುತ್ತಿದ್ದಾರೆ. ಗದುಗಿನಲ್ಲಿ ತಮ್ಮ ಗುರುಗಳು ಸ್ಥಾಪಿಸಿದ್ದ 'ವೀರಶೈವ ಪುಣ್ಯಾಶ್ರಮ' ಇವರ ಕರ್ತೃತ್ವ ಶಕ್ತಿಯಿಂದಾಗಿ ಇಂದು ಬೃಹತ್ತಾಗಿ ಬೆಳೆದಿದೆ. ನಾಡಿನ ನಾನಾ ಭಾಗದಿಂದ ಬಂದಿರುವ ಜನ್ಮಾಂಧರಿಗೆ ಹಾಗೂ ಕಲೆಯಲ್ಲಿ ಅಭಿರುಚಿಯಿಟ್ಟುಕೊಂಡು ಬಂದಿರುವ ಅನಾಥರಿಗೆ ಊಟ ಉಡಿಗೆ, ವಸತಿ ಎಲ್ಲ ಸೌಕರ್ಯ ನೀಡಿ ಸಂಗೀತ ವಿದ್ಯೆ ದಾನಮಾಡುತ್ತಿದ್ದಾರೆ. ದೇಶಕ್ಕೆ ಒಂದು ಹೊರೆಯಾಗಲಿದ್ದ ಹಾಗೂ ಜೀವನದಲ್ಲಿ ನಿಷ್ಕ್ರಿಯವಾಗಲಿದ್ದ ಅಸಂಖ್ಯಾತ ಕುರುಡರಿಗೆ ಸಂಗೀತ ವಿದ್ಯೆ ನೀಡಿ ಸಮಾಜದಲ್ಲಿ ಅವರಿಗೊಂದು ಸ್ಥಾನ ಕಲ್ಪಿಸಿಕೊಟ್ಟರು. ಬದುಕುವುದಕ್ಕೆ ಅವರಿಗೆ ಗೌರವಪೂರ್ಣವಾದ ಮಾರ್ಗ ತೋರಿದರು. ಈ ದೃಷ್ಟಿಯಿಂದ ದೇಶವೇ ಅವರಿಗೆ ಋಣಿಯಾಗಿರಬೇಕಾಗಿದೆ.

ಹಾನಗಲ್ಲ ಶ್ರೀಗಳ ಶಿಷ್ಯ ಪರಂಪರೆಯಂತೆ ಪಂಚಾಕ್ಷರ ಗವಾಯಿಗಳ ಶಿಷ್ಯ ಪರಂಪರೆಯೂ ಬಲು ದೊಡ್ಡದು. ಆ ಪರಂಪರೆಯಲ್ಲಿ ಅಗ್ರಗಣ್ಯರಾದವರೆಂದರೆ ಪಂ. ಪುಟ್ಟರಾಜ ಗ ವಾ ಯಿ ಗ ಳು. ಇವರು ಉಭಯಗಾನವಿಶಾರದರೂ, ತ್ರಿಭಾಷಾ ಕವಿಗಳೂ, ರಾಷ್ಟ್ರಪ್ರಶಸ್ತಿ ಪಡೆದವರೂ ಆಗಿದ್ದಾರೆ.

ಈ ಶಿಷ್ಯ ಪರಂಪರೆಯಲ್ಲಿ ಹೆಸರಿಸಬೇಕಾದ ಇನ್ನು ಕೆಲವು ಹೆಸರುಗಳೆಂದರೆ ಸಂಗೀತ ಸುಧಾಕರ ಪಂ. ಬಸವ ರಾಜ ರಾಜಗುರು, ಪಂ. ಪಂಚಾಕ್ಷರಸ್ವಾಮಿ ಮತ್ತಿಗಟ್ಟಿ, ಪಂ. ಸಿದ್ಧರಾಮ ಜಂಬಲದಿನ್ನಿ ಮುಂತಾದವರು.

ಹಾನಗಲ್ಲ ಶ್ರೀಗಳ ಕೃಪೆಯಿಂದ ಪಂ. ಪಂಚಾಕ್ಷರ ಗವಾಯಿಗಳ ನೇತೃತ್ವದಲ್ಲಿ ಸ ಂ ಗೀ ತ, ನಾಟಕ, ವಾದ್ಯ ಸಂಗೀತ, ಪುರಾಣ, ಕೀರ್ತನ, ನಟನಾ ಕೌಶಲ್ಯಗಳಲ್ಲಿ ನಿಷ್ಣಾತರಾದವರು ಎಣಿಕೆಗೆ ನಿಲುಕದಷ್ಟು ಜನರಿದ್ದಾರೆ.

ಇದೆಲ್ಲ ಈ ನಾಡಿನಲ್ಲಿ ನಡೆಯುವಂತಾದುದು ಶ್ರೀ ಹಾ ನ ಗ ಲ್ಲ ಕುಮಾರಶಿವಯೋಗಿಗಳ ಕೃಪೆಯಿಂದಾಗಿ ಎಂಬುದನ್ನು ನೆನೆದಾಗ ಶ್ರೀಗಳು ನಾಡಿಗೆ ಸಲ್ಲಿಸಿದ ಸರ್ವತೋಮುಖವಾದ ಸೇವೆಯ ಅರಿವು ಆಗದಿರದು.

## ಹಾನಗಲ್ಲ ಮಠದ ಇಂದಿನ ಶ್ರೀಗಳು

ಸಾವಿರದೊಂಬೈನೂರ ಆರರಲ್ಲಿ ಧಾರವಾಡ ಜಿಲ್ಲೆಯ ಅರಳಿಕಟ್ಟೆ ಹಿರೇಮಠದಲ್ಲಿ ಜ ನಿ ಸಿ ದ ರು. ಚಂದ್ರಶೇಖರ ಎಂದು ನಾಮಕರಣವಾಯಿತು. ಹಾನಗಲ್ಲ ಕುಮಾರ ಶಿವಯೋಗಿಗಳು ಸಾವಿರದೊಂಬೈನೂರ ಏಳರಲ್ಲಿ ಸ ಂ ಚಾ ರ

ಗೈಯುತ್ತ ಅರಳಿಕಟ್ಟೆಗೂ ದಯಮಾಡಿಸಿದರು. ದೇವರ ಕೋಣೆಯಲ್ಲಿ ನಿದ್ರಿಸುತ್ತಿದ್ದ ಒಂದು ವರುಷದ ಹಾಲು ಗಲ್ಲದ ಈ ಹಸುಗೂಸಿನ ತಲೆಯ ಮೇಲೆ ನಾಗರಹಾವು ಹೆಡೆ ಬಿಚ್ಚಿ ಆಡುತ್ತಲಿತ್ತು. ಆದನ್ನು ಕಂಡ ಮನೆಯವರು ಹೆದರಿ, ಆಚ್ಚರಿಗೊಂಡು ಪೂಜ್ಯ ಶ್ರೀಗಳವರಲ್ಲಿಗೆ ಧಾವಿಸಿ ನಡೆದು ದನ್ನು ಬಿನ್ನವಿಸಲು ಆಗ ಶ್ರೀಗಳು 'ನಿಮ್ಮ ಮಗು ನಿಮ್ಮ ದಾಗದೆ ಗುರುವಿನದಾಗುತ್ತದೆ. ಆಗ ಆತನಿಂದ ಲೋಕೋಪ ಕಾರವಾಗುತ್ತದೆ. ಅಂಜದಿರಿ. ನಿಮ್ಮದು ಪುಣ್ಯಗರ್ಭ' ಎಂದು ಆಶೀರ್ವದಿಸಿದರಂತೆ.

ಮುಂದೆ ಸಾವಿರದೊಂಬೈನೂರ ಹದಿನೈದರಲ್ಲಿ ಅಲ್ಲಿಯ ಭಕ್ತರು ಚಂದ್ರಶೇಖರನನ್ನು ತಮ್ಮ ಊರಿನ ಹಿರೇಮಠದ ಮೂರ್ತಿಗಳನ್ನಾಗಿ ಮಾಡಲು ಹಾನಗಲ್ಲ ಶ್ರೀಗಳ ಪಾದಕ್ಕೆ ಅರ್ಪಿಸಿದರು. ಶ್ರೀಗಳು ಶಿವಯೋಗ ಮಂದಿರದಲ್ಲಿ ಚಂದ್ರ ಶೇಖರನಿಗೆ ವಿದ್ಯಾಭ್ಯಾಸಮಾಡಲು ಅವಕಾಶ ನೀಡಿದರು. ಪೂರ್ವಾಶ್ರಮದ ಹೆಸರು ತೆಗೆದು ಗುರುಗಳು ಶ್ರೀ ರೇಣು ಕಾರ್ಯನೆಂದು ನಾಮಕರಣ ಮಾಡಿದರು.

ಶ್ರೀ ರೇಣುಕಾರ್ಯರು ಶಿವಯೋಗ ಮಂದಿರದ ಸುಂದರ ಹಾಗೂ ಪ್ರಶಾಂತ ವಾತಾವರಣದಲ್ಲಿ ಶ್ರೀ ಗರುವಿನ ಅಂತಃ ಕರಣದ, ತಪಃ ಪ್ರಭಾವದ ಬೆಳಕಿನಲ್ಲಿ ಯೋಗ, ಸಂಸ್ಕೃತ, ಕನ್ನಡ, ಸಂಗೀತ, ಚಿತ್ರಕಲೆಗಳಲ್ಲಿ ಆಸಕ್ತಿಯಿಂದ ಅಭ್ಯಾಸ ಸಾಗಿಸಿದರು. ಸಂಸ್ಕೃತದ ಉಚ್ಚ ಶಿಕ್ಷಣವನ್ನು ಪಂ. ವೀರ ಭದ್ರಶಾಸ್ತ್ರಿಗಳು ಹಾಗೂ ಪಂ. ರೇವಣಸಿದ್ಧ ಶಾಸ್ತ್ರಿಗಳಿಂದ ಪಡೆದರು. ನ್ಯಾಯ ವ್ಯಾಕರಣದಲ್ಲಿ ಬಲ್ಲಿದರಾದರು. ದೀಕ್ಷೆ ಹೊಂದಿ ದೇಶಿಕರಾದರು. ಶಿವಯೋಗ ಮಂದಿರದ ವ್ಯವಸ್ಥೆ ಯಲ್ಲೂ ಸಕ್ರಿಯವಾಗಿ ಭಾಗವಹಿಸುತ್ತಿದ್ದರು. ತಮ್ಮ

ಯೋಗವಿದ್ಯೆಯಿಂದ, ಕರ್ತವ್ಯನಿಷ್ಠೆಯಿಂದ, ಭಕ್ತಿ ಪರಾಯಣತೆಯಿಂದ ಗುರು ಹಾನಗಲ್ಲ ಕುಮಾರಶಿವಯೋಗಿಗಳ ಪ್ರೀತಿಗೆ ಪಾತ್ರರಾದರು.

ಮುಂದೆ ಹಾನಗಲ್ಲ ವಿರಕ್ತಮಠದ ಶ್ರೀ ನಿ.ಪ್ರ.ಮಹೇಶ್ವರಸ್ವಾಮಿಗಳು ಲಿಂಗೈಕ್ಯರಾಗಲು ಹುಬ್ಬಳ್ಳಿ ಮೂರುಸಾವಿರ ಮಠದ ಆಗಿನ ಜಗದ್ಗುರುಗಳಾಗಿದ್ದ ಶ್ರೀ ಗುರುಸಿದ್ಧರಾಜ ಯೋಗೀಂದ್ರ ಮಹಾಸ್ವಾಮಿಗಳು, ನವಿಲುಗುಂದದ ಶ್ರೀಗಳು, ಗುತ್ತಲದ ಶ್ರೀಗಳು ಮತ್ತು ರಾ. ಬ. ದೇವೀಹೊಸೂರಶೆಟ್ಟರು ಮೊದಲಾದವರ ಬಯಕೆಯಂತೆ ಶ್ರೀ ರೇಣುಕ ದೇಶಿಕರನ್ನು ೧೯೩೬ ರಲ್ಲಿ ಹಾನಗಲ್ಲ ವಿರಕ್ತ ಮಠಕ್ಕೆ ಅಧಿಕಾರಿಗಳನ್ನಾಗಿ ಮಾಡಿದರು.

ಹಾನಗಲ್ಲ ಮಠದ ಅಧಿಕಾರದ ಕಾಲಕ್ಕೆ ಶ್ರೀ ಗುರುವಿನ ಮೊದಲ ಪುಣ್ಯನಾಮವಾದ ಸದಾಶಿವಸ್ವಾಮಿಗಳೆಂದು ನಾಮಕರಣವಾಯ್ತು ಇವರಿಗೆ. ಅಂದಿನಿಂದ ಸಮಗ್ರ ಮೂವತ್ತೇಳು ವರುಷಗಳ ಕಾಲ ಶಿವಯೋಗ ಮಂದಿರ ಹಾಗೂ ಹಾನಗಲ್ಲ ಮಠದ, ಸಮಾಜದ ಏಳ್ಗೆಗಾಗಿ ಅವಿಶ್ರಾಂತವಾಗಿ ದುಡಿಯುತ್ತ ಬಂದಿದ್ದಾರೆ.

ಶಿವಯೋಗ ಮಂದಿರದ ಸರ್ವತೋಮುಖ ಅಭಿವೃದ್ಧಿ ಹಾಗೂ ಅಲ್ಲಿರುವ ವಟುಗಳ, ಸಾಧಕರ ಜೀವನ ಸಿದ್ಧಿಗಾಗಿ ಶ್ರೀ ಸದಾಶಿವ ಸ್ವಾಮಿಗಳು ಹಗಲಿರುಳು ಪರಿಶ್ರಮಿಸುತ್ತಿದ್ದಾರೆ. ತಮ್ಮ ಶ್ರೀ ಗುರುವಿನ ಕೃಪೆಯಿಂದ ಅಲ್ಲಿ ಈಗ ಅದ್ಭುತವಾದ ಕಾರ್ಯಗಳನ್ನು ಸ್ವಾಮಿಗಳು ಮಾಡುತ್ತಲಿದ್ದಾರೆ. ತಮ್ಮ ಗುರುವಿನ ಸಮಾಧಿ ಹಾಗೂ ಸಮಾಧಿಯ ಮೇಲೆ ಅಮೋಘವಾದ, ಮನೋಹರವಾದ, ಕಲಾತ್ಮಕವಾದ ಮಂದಿರ ಕಟ್ಟಿಸಿದ್ದಾರೆ. ಅಲ್ಲಿಯ ಕಲ್ಲು ಕಂಬಗಳಲ್ಲಿ

ಅ ರ ಳಿ ರು ವ ಲತಾಬಳ್ಳಿಗಳು, ಸುಳುಹು–ಹೊಳಹುಗಳು ಶ್ರೀಗಳ ಕಲಾಪ್ರಜ್ಞೆಗೆ, ಅಸದೃಶವಾದ ಗುರುಭಕ್ತಿಗೆ ಸಾಕ್ಷಿ ಹೇಳುತ್ತಲಿವೆ.

ಬೇಸಿಗೆಯಲ್ಲಿ ಶಿವಯೋಗ ಮಂದಿರದಲ್ಲಿರುವ ವಟು ಗಳಿಗೆ, ಸಾಧಕರಿಗೆ, ಪಂಡಿತರಿಗೆ ಬಿಸಿಲಬೇಗೆ ತಗಲದಿರ ಲೆಂದು ಅವರನ್ನೆಲ್ಲ ಆ ತಾಯ ವಾತ್ಸಲ್ಯದ ಶ್ರೀ ಸದಾಶಿವ ಸ್ವಾಮಿಗಳು ತೆಂಗು ಕಂಗುಗಳಿಂದ ತಂಪನೀಡುವ ಮಲೆ ನಾಡಿನ ಹಾನಗಲ್ಲು ಮಠಕ್ಕೆ ಕರೆತರುತ್ತಾರೆ. ಬೇಸಿಗೆ ಮುಗಿ ಯುವವರೆಗೂ ಸಾಧಕರ, ವಟುಗಳ ಶಿಕ್ಷಣ, ಯೋಗಾ ಭ್ಯಾಸ ಎಲ್ಲವೂ ಅಲ್ಲಿಯಂತೆಯೇ ಶ್ರೀಮಠದಲ್ಲಿ ನಡೆಯು ತ್ತದೆ. ಮಳೆಗಾಲ ಆರಂಭವಾದ ಕೂಡಲೇ ಮತ್ತೆ ಇಲ್ಲಿಂದ ಮಂದಿರಕ್ಕೆ ಮರಳಿ ಕರೆತರುತ್ತಾರೆ.

ಶ್ರೀ ಸದಾಶಿವಸ್ವಾಮಿಗಳ ಕರ್ತೃತ್ವ ಶಕ್ತಿಯಿಂದಾಗಿ ಇಂದು ಶಿವಯೋಗ ಮ ಂ ದಿ ರ ದ ಲ್ಲಿ ಕೋಟಿ ಕೋಟಿ ರೂಪಾಯಿ ಬೆಲೆಯ ಆಧುನಿಕ ಕಟ್ಟಡಗಳು ತಲೆಯೆತ್ತಲು ಸಾಧ್ಯವಾಗಿದೆ. ಆದರೆ ಅವರು 'ಇದೆಲ್ಲ ನನ್ನಿಂದಾಯಿತೆಂದು ಹೇಳುವುದೇ ಸರ್ವಥಾ ಸಲ್ಲದು. ಇದೆಲ್ಲ ಆ ಪರಮ ಗುರು ವಾದ ಕುಮಾರೇಶನದು' ಎನ್ನುತ್ತಾರೆ ಅಪಾರ ಶ್ರದ್ಧೆಯಿಂದ ಭೃತ್ಯಾಚಾರದಿಂದ.

ಶ್ರೀ ಸದಾಶಿವಸ್ವಾಮಿಗಳ ದಾಸೋಹಂಭಾವ, ಅಂತಃ ಕರಣ ಅಸದೃಶವಾದವುಗಳು.

ಸದಾ ನಗುಮೊಗದ, ಎತ್ತರದ ನಿಲುವಿನ, ಹೊಳಪುಳ್ಳ ಕಣ್ಣಿನ, ಭಸ್ಮಭೂಷಿತ ಲಲಾಟದ, ಎಪ್ಪತ್ತರ ಅಂಚಿನಲ್ಲಿ ರುವ ಈ ಕಾಷಾಂಬರಧಾರಿಯ ದರ್ಶನ ಪಡೆಯುವುದೇ ಒಂದು ಭಾಗ್ಯ.

# ಲಿಂಗವೆನ್ನಿ, ಲಿಂಗೈಕ್ಯವೆನ್ನಿ

ಧರ್ಮ, ಸಮಾಜ, ನಾಡಿನ ಸರ್ವತೋಮುಖ ಏಳ್ಗೆಗಾಗಿ ತಮ್ಮ ಸುದೀರ್ಘ ಜೀವನವನ್ನು ಮುಡುಪಾಗಿಟ್ಟ ಶ್ರೀಗಳು ವೃದ್ಧಾಪ್ಯದಲ್ಲಿ ಚರಜಂಗಮರಾಗಿ ಈ ನಾಡಿನ ತುಂಬ ಸಂಚಾರ ಕೈಕೊಂಡು ಜನಮನದ ಕಾಳಿಕೆಯ ಕಳೆವಲ್ಲಿ ನಿರತರಾಗಿದ್ದರು. ಹೀಗೆಯೇ ಸಂಚಾರ ಮಾಡುತ್ತ ಮುದೆನೂರಿಗೆ ಶ್ರೀಗಳು ದಯಮಾಡಿಸಿದರು. ಅಲ್ಲಿಯ ವಾಸ್ತವ್ಯದಲ್ಲಿ ಒಮ್ಮೆಲೇ ಶ್ರೀಗಳವರು ಅನಾರೋಗ್ಯಕ್ಕೀಡಾದರು. ಪರಮ ಆಚಾರನಿಷ್ಠರಾದ ಶ್ರೀಗಳು ಔಷಧೋಪಚಾರಕ್ಕೆ ಒಪ್ಪದಾದರು. ನಿತ್ಯದ ಸ್ನಾನ, ಪೂಜೆ, ಅನುಷ್ಠಾನ, ಧ್ಯಾನ ಎಲ್ಲವೂ ಸಾಗಲೇಬೇಕು. ಕಾಹಿಲೆ ದಿನಗಳೆದಂತೆ ಹೆಚ್ಚುತ್ತ ಹೋದಾಗ ಅಲ್ಲಿಯ ಶಿಷ್ಯವರ್ಗಕ್ಕೆ ಗಾಬರಿಯಾಯಿತು. ಆದರೆ ಶ್ರೀಗಳದು ಸದಾ ಸಮಾಜಸೇವೆಯ ಚಿಂತೆ. ಸನ್ನಿಧಿಗೆ ತಮ್ಮ ಅನಾರೋಗ್ಯದ ಕಲ್ಪನೆಕೂಡ ಇರಲಿಲ್ಲ. ಅಲ್ಲಿಂದ ಹಾವೇರಿಗೆ ಕರೆದು ತಂದರು. ಹಾವೇರಿಗೆ ಬಂದಕೂಡಲೇ ಶ್ರೀಗಳವರ ಅಸ್ವಾಸ್ಥ್ಯದ ವಿಷಯ ನಾಡಿನ ತುಂಬ ಹಬ್ಬಿತು. ಸುತ್ತಿನಿಂದಲೂ ಭಕ್ತರು ಹಾವೇರಿಗೆ ಧಾವಿಸಿದರು.

ಅಲ್ಲಿಗೆ ಬಂದ ನಂತರವೂ ಆರೋಗ್ಯ ಸುಧಾರಿಸಲಿಲ್ಲ. ಶ್ರೀಗಳವರ ಇಚ್ಛೆಯಂತೆ ಶಿವಯೋಗ ಮಂದಿರಕ್ಕೆ ದೇವರ ಮೇಲೆ ಭಾರಹಾಕಿ ಶಿಷ್ಯರು ಅವರನ್ನು ಕರೆತಂದರು.

ಶಿವಯೋಗ ಮಂದಿರ ತಲುಪುವವರೆಗೂ ಶ್ರೀಗಳ ಪ್ರಾಣಪಕ್ಷಿ ಉಳಿದೀತು ಎನ್ನುವ ಭರವಸೆ ಯಾರಿಗೂ ಇರಲಿಲ್ಲ. ಆದರೆ ಸಂಕಲ್ಪ ಸಿದ್ಧಿಯನ್ನು ಪಡೆದಿದ್ದ ಪರಮ

ಶಿವಯೋಗಿಗಳಾದ ಹಾ ನ ಗ ಲ್ಲ ಕುಮಾರಸ್ವಾಮಿಗಳು ಹಾರಲು ಸಿದ್ಧವಾಗಿದ್ದ ಪ್ರಾಣಪಕ್ಷಿಯನ್ನು ತಮ್ಮ ಯೋಗ ಬಲದಿಂದ ಹಾರದಂತೆ ಮಾಡಿದ್ದರು.

ಶಿವಯೋಗ ಮಂದಿರ, ಅವರದೇ ಸೃಷ್ಟಿಯಾದ ಶಿವ ಯೋಗ ಮಂದಿರಕ್ಕೆ ಬಂದು ಸ್ನಾನ ಪೂಜಾದಿಗಳನ್ನು ಮುಗಿಸಿದರು. ಲಿಂಗಯ್ಯನ ಧ್ಯಾನದಲ್ಲಿರುವಾಗಲೇ ಕಣ್ಣು ತೆರೆದಿರುವಂತೆಯೇ ಲಿಂಗಯ್ಯನೊಳು ಒಂದಾದರು. ಲಿಂಗೈ ಕ್ಯದ ಆ ದಿನ ಸಾವಿರದೊಂಬೈನೂರ ಮೂವತ್ತನೆಯ ಇಸವಿ, ಮಾಘ ಬಹುಳ ಸಪ್ತಮಿ, ಗುರುವಾರ ಗೋಧೂ ಳಿಯ ಸಮಯ.

ಸಮಗ್ರ ಅರವತ್ತು ಮೂರು ವರುಷದ ತಮ್ಮ ಜೀವಿತ ಕಾಲದಲ್ಲಿ ಶ್ರೀಗಳು ನಾಡು, ನುಡಿ, ಧರ್ಮ, ಸಮಾಜದ ಚಿಂತನೆಯಲ್ಲಿಯೇ ಕಾಲ ಕಳೆದರು.

ಪಂಚ ಭೌತಿಕ ಕಾಯದಿಂದ ಮಾತ್ರ ಮರೆಯಾದ ಶ್ರೀಗಳು ಬೆಳಕಿನ ರೂಪದಲ್ಲಿ ಬಯಲ ತುಂಬ ತುಂಬಿ ಕೊಂಡಿದ್ದಾರೆ. ಆ ಮಹಾ ಬೆಳಕು ಹಲವು ರೂಪದಲ್ಲಿ ಇಂದೂ ಲೋಕದ ಒಳಿತಿನಲ್ಲಿ ಚಿಂತನಶೀಲವಾಗಿದೆ.

———

# ಪ್ರಶ್ನೆಗಳು

1. ಸದಾಶಿವಯ್ಯನ ತಂದೆ ತಾಯಿಗಳ ಹೆಸರೇನು? ಅವನು ಯಾವಾಗ ಎಲ್ಲಿ ಜನಿಸಿದ ?
2. ಸದಾಶಿವನಿಗೆ ವಿದ್ಯಾಭ್ಯಾಸದ ಕಾಲದಲ್ಲಿ ಒದಗಿದ ತೊಂದರೆಗಳು ಯಾವುವು ?
3. ಇಷ್ಟಲಿಂಗದ ಬಗ್ಗೆ ಸದಾಶಿವಯ್ಯನವರ ಸಂಶಯ ನಿವಾರಣೆ ಯಾದ ಬಗೆ ಹೇಗೆ ?
4. ವೀರಶೈವ ಮಹಾಸಭೆಯನ್ನು ಕುರಿತು ನಾಲ್ಕು ಮಾತುಗಳನ್ನು ಬರೆಯಿರಿ.
5. ಶ್ರೀಗಳು ಶಿವಯೋಗ ಮಂದಿರಕ್ಕೆ ಸ್ಥಳ ನಿರ್ದೇಶನ ಮಾಡಿದ ಸಂದರ್ಭವನ್ನು ವಿವರಿಸಿರಿ.
6. ಶಿವಯೋಗ ಮಂದಿರದ ಪರಿಸರವನ್ನೂ, ಅಲ್ಲಿನ ನಿತ್ಯಕರ್ಮ ಗಳನ್ನೂ ವಿವರಿಸಿರಿ.
7. ಪರಳಿಯ ಪ್ರಕರಣದಲ್ಲಿ ಶ್ರೀಗಳು ವಹಿಸಿದ ಪಾತ್ರದ ಮಹತ್ವ ವೇನು ?
8. ಶ್ರೀಗಳು ನಾಡಿಗೆ ಸಲ್ಲಿಸಿದ ಸರ್ವತೋಮುಖವಾದ ಸೇವೆಯನ್ನು ಸವಿಸ್ತಾರವಾಗಿ ಬರೆಯಿರಿ.

# ಮೂಲವಿಜ್ಞಾನ ಪಾಠಮಾಲೆ

**ನಾಲ್ಕು ಬಣ್ಣಗಳ ಚಿತ್ರಗಳ ಸಮೇತ ಮಕ್ಕಳ ಮನಸ್ಸನ್ನು ಆಕರ್ಷಿಸುವಂತೆ**
(16 ಪುಸ್ತಕಗಳ ಕಟ್ಟು ಬೆಲೆ ರೂ. 32–00)

| | | ಅನುವಾದ : |
|---|---|---|
| ೧. | ವಾಯು | ಟಿ. ಭಾಗ್ಯಲಕ್ಷ್ಮಿ |
| ೨. | ಭೂಮಿ | ಕೆ. ಸಿ. ಶಿವಪ್ಪ |
| ೩. | ವಿದ್ಯುತ್ತು | ಸಿ. ಕೆ. ವೆಂಕಟನರಸಿಂಹಯ್ಯ |
| ೪. | ಬಲಗಳು ಮತ್ತು ಅಳತೆಗಳು | ಜಿ. ಟಿ. ನಾರಾಯಣರಾವ್ |
| ೫. | ಉಷ್ಣ | ಕೆ. ಶ್ರೀನಿವಾಸನ್ |
| ೬. | ಬೆಳಕು | ಎಚ್. ವಿ. ಶ್ರೀರಂಗರಾಜು |
| ೭. | ಜೀವಂತ ವಸ್ತುಗಳು : ಪ್ರಾಣಿಗಳು | ಕೆ. ಶಿವರಾಮ ಕಾರಂತ |
| ೮. | ಜೀವಂತ ವಸ್ತುಗಳು : ಮಾನವ | ಟಿ. ಭಾಗ್ಯಲಕ್ಷ್ಮಿ |
| ೯. | ಜೀವಂತ ವಸ್ತುಗಳು : ಸಸ್ಯಗಳು | ಜೆ. ಎಂ. ಟಿ. ರಾಜನ್ |
| ೧೦. | ಕಾಂತತ್ವ | ಎನ್. ನಾರಾಯಣ ಸಿಂಗ್ |
| ೧೧. | ಶಬ್ದ | ಕೆ. ಎಸ್. ರಾಮಕೃಷ್ಣಮೂರ್ತಿ |
| ೧೨. | ನೀರು | ಎ. ಚಂದ್ರಶೇಖರಯ್ಯ |
| ೧೩. | ಪ್ರಾಣಿಗಳು ಮತ್ತು ಅವುಗಳ ಮರಿಗಳು | ಜೆ. ಎಂ. ಟಿ. ರಾಜನ್ |
| ೧೪. | ಆಕಾಶ ಮತ್ತು ಮಾನವ | ಎಸ್. ಆರ್. ಮಾಧುರಾವ್ |
| ೧೫. | ಕಡಲಿನ ಜೀವಿಗಳು | ಕೆ. ಶಿವರಾಮ ಕಾರಂತ |
| ೧೬. | ಪರಮಾಣುಗಳು | ಜೆ. ಆರ್. ಲಕ್ಷ್ಮಣರಾವ್ |

ಅಧಿಕೃತ ಮಾರಾಟಗಾರರು :
**ಇಂಡಿಯ ಬುಕ್ ಹೌಸ್**
ಗಾಂಧಿನಗರ, ಬೆಂಗಳೂರು - 560009

ಆಧುನಿಕ
ಕರ್ನಾಟಕ
ನಿರ್ಮಾಪಕರು

ಕರ್ನಾಟಕದ
ವೈಭವ

ಕರ್ನಾಟಕದ
ಸುವರ್ಣ ಯುಗ

ಕನ್ನಡದ
ಕಡುಗಲಿಗಳು

ಕನ್ನಡದ
ಕವಿ ಪುಂಗವರು





















ಇಂಡಿಯಾ ಬುಕ್ ಹೌಸ್ — — ಬೆಂಗಳೂರು ೮